# ನೆರಳು ಚೆಲ್ಲಿದ ಮಾಮರ

## ಪೈಲೂರು ಲಕ್ಷ್ಮೀನಾರಾಯಣ ರಾವ್ ನೆನಪು




ಸಂಪಾದಕ

ಶಿವರಾಂ ಪೈಲೂರು

ಪ್ರಕಾಶನ

ಪೈಲೂರು ಮನೆ, ವ್ಯಾಸರಾವ್ ರಸ್ತೆ, ಮಂಗಳೂರು - 575 003

**Neralu Chellida Mamara** - A collection of articles on Pailoor Lakshminarayana Rao, edited by Shivaram Pailoor, Sri Nilaya, Post : Kukkujadka - 574 212 Karnataka. Published by Pailoor Mane, Vyasarao Road, Mangalore - 575 003



ಮೊದಲ ಮುದ್ರಣ : 2004

ಪುಟಗಳು : 9+115



ಛಾಯಾಚಿತ್ರಗಳು :
ಯಜ್ಞ, ಎಂ.ಜಿ. ಕಜೆ ಮತ್ತು ಶಿವರಾಂ ಪೈಲೂರು
*ಜೊತೆಗೆ -*
ಕೃಷ್ಣಕುಮಾರ್ ಪೈಲೂರು, ದಿವ್ಯಾ ರಾಜೇಶ್,
ಕೋಟೆ ವಸಂತಕುಮಾರ ಹಾಗೂ ಜಿ.ಎಸ್. ಉಬರಡ್ಕ ಅವರ ಸಂಗ್ರಹದಿಂದ.

ಪ್ರಕಟಣೆಗೆ ಆರ್ಥಿಕ ನೆರವು :
ಮನೋಹರ ಉಪಾಧ್ಯ
ಜಯಲಕ್ಷ್ಮಿ ಪೈಲೂರು
ಶಾರದಾ ಭಟ್
ರಾಮಚಂದ್ರ ಪೈಲೂರು



ಮುಖಪುಟ ವಿನ್ಯಾಸ :
ರವಿ ವಿಶ್ವಜ್ಞ, ಧಾರವಾಡ

ಒಳಪುಟ ವಿನ್ಯಾಸ :
ಕಲ್ಲೂರು ನಾಗೇಶ್, ಭಾರತಿ ಡಿ.

ಟೈಪ್ ಸೆಟ್ಟಿಂಗ್ ಮತ್ತು ಮುದ್ರಣ :
ಆಕೃತಿ ಕಂಪ್ಯೂಟರ್ಸ್, ಮಂಗಳೂರು - 1
✆ : 0824 - 2443002



## ನೆರಳು ಚೆಲ್ಲಿದ ಮಾಮರ

ಮಂಗಳೂರಿನ ವ್ಯಾಸರಾವ್ ರಸ್ತೆಯ ಪಕ್ಕದಲ್ಲಿರುವ ಪೈಲೂರು ಲಕ್ಷ್ಮೀನಾರಾಯಣ ರಾವ್ (ಮಂಗಳೂರು ಅಜ್ಜ) ಅವರ ಮನೆಯ ಅಂಗಳದಲ್ಲಿ ಸುಮಾರು ಅರುವತ್ತು ವರ್ಷ ಪ್ರಾಯದ ಮಧ್ಯಮ ಗಾತ್ರದ ಕಸಿ ಮಾವಿನ ಮರವೊಂದಿದೆ. ಇದರ ಕಾಯಿಗಳ ಆಕಾರ ಸುಮಾರಾಗಿ 'ಕದ್ರಿ' ಮಾವನ್ನು ಹೋಲುತ್ತದೆ. ಸರದಿಯಂತೆ ಕೊಂಬೆ ಬದಲಾಯಿಸುತ್ತ ಪ್ರತಿ ವರ್ಷ ಒಂದೇ ಕೊಂಬೆಯಲ್ಲಿ ಹೇರಳ ಹೂ ಬಿಡುವುದು ಈ ಮರದ ವೈಶಿಷ್ಟ್ಯ. ಇದರ ಹಣ್ಣು ತಿನ್ನಲು ತುಂಬಾ ರುಚಿ. ಮನೆಯ ಮಾಡಿನ ಅಂಚಿಗೇ ತಾಗಿದಂತೆ ಸುತ್ತಲೂ ಹರಡಿರುವ ಈ ಮರದ ದಟ್ಟ ಹಸುರಿನ ಕೊಂಬೆ ಕೊಡೆ ನೆರಳಲ್ಲಿ ಅಜ್ಜನ ಮಕ್ಕಳೂ, ಮೊಮ್ಮಕ್ಕಳೂ ನಲಿದಾಡಿದಂತೆ ಅಜ್ಜನ ನೂರೆಂಟು ಕನಸುಗಳೂ ಅರಳಿಕೊಂಡಿವೆ.

ಈ ಮರದಂತೆ ಅಜ್ಜ ನಮಗೆಲ್ಲ ಹಣ್ಣನ್ನೂ, ನೆರಳನ್ನೂ ನೀಡಿದವರು. ಅಜ್ಜನ ಗಾಢ ನೆನಪನ್ನು ಮೂಡಿಸುತ್ತಿರುವ ಈ ಮರದಲ್ಲಿ ಈಗ ಅಜ್ಜನೇ ಉಸಿರಾಡಿದಂತೆ ಭಾಸವಾಗುತ್ತಿದೆ. ಇಡೀ ಮರವೇ ಈಗ ಏಕ ಕಾಲದಲ್ಲಿ ಪ್ರೀತಿಯ ಅಜ್ಜ, ಅಪ್ಪ, ಚಿಕ್ಕಪ್ಪ, ಅಣ್ಣ, ತಮ್ಮ, ಮಾವ, ಗೆಳೆಯ - ಹೀಗೆ ನೆನೆದವರ ಮನದಂತೆ ಎಲ್ಲವೂ ಆಗಿರುವ ಅಜ್ಜನ ವ್ಯಕ್ತಿತ್ವದ ಸಂಕೇತದಂತಿದೆ. ಆದುದರಿಂದಲೇ ಈ ಮರವೀಗ ನೆನೆದವರ ಮನದಲ್ಲಿ ನೆರಳು ಚೆಲ್ಲಿದ ಮಾಮರ.

- ಜಿ.ಎಸ್. ಉಬರಡ್ಕ

# ನಿಮ್ಮೊಂದಿಗೆ

ಪೈಲೂರು ಲಕ್ಷ್ಮೀನಾರಾಯಣ ರಾವ್ ಅಥವಾ 'ಮಂಗಳೂರು ಅಜ್ಜ' ಡಿಸೆಂಬರ್ 8, 2002ರಂದು ನಮ್ಮನ್ನಗಲಿದರು. ಅನನ್ಯ ವ್ಯಕ್ತಿತ್ವದ ಅಜ್ಜ ತಮ್ಮ 91 ವರ್ಷಗಳ ಜೀವಿತಾವಧಿಯಲ್ಲಿ ಮಾಡಿರುವ ಸಾಧನೆಗಳು ಅನೇಕ. ಸದಾ ಹೊಸತಿನೆಡೆಗೆ ತುಡಿಯುತ್ತಿದ್ದ ಅವರು ಇಡೀ ಬದುಕನ್ನು 'ಅಮೃತ ಗಳಿಗೆ' ಎಂದು ಸ್ವೀಕರಿಸಿದವರು. ದಕ್ಷಿಣ ಕನ್ನಡ ಜಿಲ್ಲೆಯ ಜನಜೀವನಕ್ಕೆ ಅನೇಕ ಸದಭಿರುಚಿಗಳನ್ನು ಕಸಿ ಮಾಡಿದ್ದ ಅಜ್ಜ, ಸದಾ ಎಲೆ ಮರೆಯ ಕಾಯಿಯಾಗಿಯೇ ಇದ್ದವರು; ಹಾಗೆಯೇ ಇರಬೇಕೆಂದು ಬಯಸಿದವರು.

'ಎಲ್ಲರಂಥವರಲ್ಲ ಈ ಅಜ್ಜ' ಎನ್ನುತ್ತ ಅಜ್ಜನ ಕುರಿತು ನನ್ನಲ್ಲಿ ಕುತೂಹಲ, ಆಸಕ್ತಿ, ಅರಿವು ಹಾಗೂ ಅಭಿಮಾನ ಮೂಡಿಸಿದವರು ಅಣ್ಣ ಜಿ.ಎಸ್. ಉಬರಡ್ಕ. 1991ರಲ್ಲಿ ನಾನು ಮಂಗಳೂರಿನಲ್ಲಿ ಕೆಲಸಕ್ಕೆ ಸೇರಿದಾಗ ಅವರು ಹೇಳಿದ ಮೊದಲ ಮಾತು 'ಅಜ್ಜನ ಬಗ್ಗೆ ನೀನು ಲೇಖನ ಬರಿ'. ನಂತರದ ದಿನಗಳಲ್ಲಿ ಅಣ್ಣ ಆಗಾಗ ಈ ಬಗ್ಗೆ ನೆನಪಿಸುತ್ತಿದ್ದರೂ ನನಗೆ ಅದು ಸಾಧ್ಯವಾಗಲಿಲ್ಲ. ತನ್ನ ಕುರಿತು ಎಂದೂ ಹೇಳಿಕೊಳ್ಳದ ಅಜ್ಜ ಹಿಂದಿನ ದಿನಗಳನ್ನು ನೆನಪಿಸುವ ಬದಲು ಮುಂಬರುವ ದಿನಗಳಲ್ಲಿ ಕೈಗೊಳ್ಳಬೇಕಾದ ಯೋಜನೆಗಳನ್ನು ವಿವರಿಸುತ್ತಿದ್ದರು. ಅಜ್ಜನನ್ನು ತಿಳಿಯಲು ಯತ್ನಿಸುವುದೆಂದರೆ ನನಗೆ ದಟ್ಟ ಅರಣ್ಯದೊಳಕ್ಕೆ ನಡೆದುಹೋದಂತಾಗುತ್ತಿತ್ತು. 'ಹಾಗಾದರೆ ಪುಸ್ತಕವನ್ನೇ ಬರಿ' ಅಂತ ಅಣ್ಣ ಸಲಹೆ ಮಾಡಿದರೂ ಆ ನಿಟ್ಟಿನಲ್ಲಿ ನನಗೆ ಮುಂದುವರಿಯಲಾಗಲಿಲ್ಲ. ಆದರೆ ಅಜ್ಜನ ಫೋಟೋಗಳನ್ನೇನೋ ಒಂದಷ್ಟು ತೆಗೆದೆ.

ಈ ನಡುವೆ 1997ರಲ್ಲಿ ನಾನು ಧಾರವಾಡಕ್ಕೆ ಬಂದೆ. ಪುಸ್ತಕದ ಉದ್ದೇಶದಿಂದ ಅಜ್ಜನನ್ನು ಒಂದೆರಡು ಬಾರಿ ಮಾತನಾಡಿಸಿದರೂ ಅವರಲ್ಲಿ ಮೊದಲಿದ್ದ ಲವಲವಿಕೆ ಮಾಸಿತ್ತು. ಕ್ರಮೇಣ ಅಜ್ಜನ ದೇಹಾರೋಗ್ಯವೂ ಕ್ಷೀಣಿಸತೊಡಗಿದ್ದರಿಂದ ನಾನು ಸುಮ್ಮನಾದೆ. ಅಜ್ಜ ವಿದಾಯ ಹೇಳಿಯೇಬಿಟ್ಟರು.

ಜನವರಿ 5, 2003ರಂದು ಅಜ್ಜನ ನೆನಪಿನಲ್ಲಿ ಮಂಗಳೂರಿನಲ್ಲಿ ಕಾರ್ಯಕ್ರಮ ಹಮ್ಮಿಕೊಂಡಿದ್ದೆವು. ಆ ಸಂದರ್ಭದಲ್ಲಿ ಮಾತನಾಡಿದ ಗಣ್ಯರು, ಅಜ್ಜನ ಆಪ್ತರು 'ರಾಯರ ಕುರಿತು ಪುಸ್ತಕ ಪ್ರಕಟಿಸುವುದು ಅಗತ್ಯ' ಎಂಬ ಅಭಿಪ್ರಾಯವನ್ನು ಮುಂದಿಟ್ಟರು. ಕಾರ್ಯಕ್ರಮ ಮುಗಿಯುವ ಮುನ್ನವೇ ಆತ್ಮೀಯರಾದ ಡಾ. ಮನೋಹರ ಉಪಾಧ್ಯ ಒಂದಷ್ಟು ಹಣ ಕೈಯಲ್ಲಿಟ್ಟು, 'ಅಜ್ಜನ ಹೆಸರಿನಲ್ಲಿ ಏನನ್ನಾದರೂ ಮಾಡು' ಎಂದರು. ಅಜ್ಜನ ಮಕ್ಕಳೂ (ನನ್ನ ಚಿಕ್ಕಪ್ಪಂದಿರು ಹಾಗೂ ಅತ್ತೆಯಂದಿರು) ಪುಸ್ತಕ ಪ್ರಕಟಣೆಯ ಪ್ರಸ್ತಾಪವನ್ನು ಬೆಂಬಲಿಸಿ, ಈ ನಿಟ್ಟಿನಲ್ಲಿ ಮುಂದುವರಿಯುವಂತೆ ಸೂಚಿಸಿದರು. ಕೂಡಲೇ ತಯಾರಿ ಆರಂಭಿಸಿದೆ...

ಪುಸ್ತಕ ಈ ರೂಪದಲ್ಲಿ ಹೊರಬರುತ್ತಿರುವುದಕ್ಕೆ ಕಾರಣರಾದ ಎಲ್ಲರಿಗೂ ನನ್ನ ಕೃತಜ್ಞತೆಗಳು. ಲೇಖನಗಳನ್ನು ನೀಡಿದ ಹಿರಿಯರಿಗೆ ಮೊದಲ ನಮನ. ಚಿಕ್ಕಪ್ಪಂದಿರಾದ ಕೃಷ್ಣಕುಮಾರ್ ಪೈಲೂರು, ರಾಮಚಂದ್ರ ಪೈಲೂರು, ಅತ್ತೆಯಂದಿರಾದ ಜಯಲಕ್ಷ್ಮಿ, ಶಾರದಾ ಹಣಕಾಸು ಸೇರಿದಂತೆ ಹಲವು ರೀತಿಯಲ್ಲಿ ನೆರವಾಗಿದ್ದಾರೆ. ದಿವ್ಯಾ ತಿಂಗಳಿಗೆರಡು ಬಾರಿ ಈಮೇಲ್ ಮಾಡಿ 'ಪುಸ್ತಕ ಎಲ್ಲಿಯವರೆಗೆ ಬಂತು?' ಎಂಬ ಪ್ರಶ್ನೆಯೊಂದಿಗೆ ಪ್ರೋತ್ಸಾಹದ ಮಾತುಗಳನ್ನಾಡುತ್ತಿದ್ದಳು.

ಪುಸ್ತಕದ ಹಿಂದಿರುವ ಪ್ರೇರಕ ಶಕ್ತಿ ಅಣ್ಣ ಜಿ.ಎಸ್. ಉಬರಡ್ಕ. ಈ ಬಗ್ಗೆ ಆಗಾಗ ಸಲಹೆ ಸೂಚನೆಗಳನ್ನು ನೀಡುತ್ತಿದ್ದ ಅವರು, ಲೇಖನಗಳ ಅಂತಿಮ ಪ್ರತಿಯನ್ನು ಓದಿ ತಪ್ಪುಗಳನ್ನೆಲ್ಲ ಸರಿಪಡಿಸಿದ್ದಾರೆ. ಪುಸ್ತಕದ ಶೀರ್ಷಿಕೆಯೂ ಅವರದೆ. ಈ ಪುಸ್ತಕವನ್ನು ಕುರಿತ ಮೆಚ್ಚುಗೆಯ ಮಾತುಗಳೆಲ್ಲ ಅವರಿಗೇ ಸಲ್ಲುತ್ತವೆ.

ಈ ಪುಸ್ತಕದ ಎಲ್ಲ ಕೆಲಸಗಳ ಹಿಂದೆ ಸಂಗಾತಿ ಅನಿತಾಳ ಪಾತ್ರವಿದೆ.

ಮಂಗಳೂರು ಹಾಗೂ ಧಾರವಾಡದ ಆತ್ಮೀಯ ಗೆಳೆಯರ ಸಹಕಾರವನ್ನು ನೆನೆಯಲೇಬೇಕು. ನಾನು ಹೊರಿಸಿದ ಯಾವುದೇ ಜವಾಬ್ದಾರಿಗೂ ಅವರು 'ಇಲ್ಲ' ಎಂದದ್ದಿಲ್ಲ.

ಪ್ರೀತಿಯಿಂದ ಆಶೀರ್ವದಿಸಿರುವ ಮಂಗಳೂರು ಅಜ್ಜಿ (ಪರಮೇಶ್ವರಿ ಪೈಲೂರು) ಹಾಗೂ ಮಿತ್ತಮಜಲು ಅಜ್ಜ (ಪೈಲೂರು ಮಹಾಬಲೇಶ್ವರಯ್ಯ) - ಇವರಿಗೂ ಪ್ರಣಾಮಗಳು.

ಈ ಪುಸ್ತಕದ ಹೊದಿಕೆ ಪುಟ ವಿನ್ಯಾಸಗೊಳಿಸಿರುವ ಕಲಾವಿದ ರವಿ ವಿಶ್ವಜ್ಞ (ಧಾರವಾಡ) ಹಾಗೂ ಪುಸ್ತಕದ ಒಳಪುಟ ವಿನ್ಯಾಸಗೊಳಿಸಿ ಸುಂದರವಾಗಿ ಪ್ರಕಟಿಸಿರುವ ಕಲ್ಲೂರು ನಾಗೇಶ್ (ಆಕೃತಿ ಕಂಪ್ಯೂಟರ್ಸ್, ಮಂಗಳೂರು) ಅವರಿಗೆ ಪ್ರೀತಿಯ ವಂದನೆ.

**ಶಿವರಾಂ ಪೈಲೂರು**
'ಶ್ರೀ ನಿಲಯ'
ಏಪ್ರಿಲ್ 15, 2004

# ತಳಿರು ತೋರಣ



# ಯಜಮಾನರು...

ಪರಮೇಶ್ವರಿ ಪೈಲೂರು

ನಮ್ಮ ಮದುವೆಯಾದದ್ದು 1941ನೇ ಇಸವಿ ಫೆಬ್ರವರಿ 7, ಶುಕ್ರವಾರದಂದು. ಆಗ ನನಗೆ 14 ವರ್ಷ; ಯಜಮಾನರಿಗೆ 29 ವರ್ಷ. ಅದೇ ವರ್ಷ ಅವರು ಕೊಯಮತ್ತೂರಿಗೆ ಸಹಕಾರಿ ತರಬೇತಿಗಾಗಿ ಹೋದವರು ಮಿಲಿಟರಿ ಸೇರಿಬಿಟ್ಟರು. ನನಗೆ ತುಂಬಾ ಭಯವಾಯಿತು. ಆ ಸಂದರ್ಭದಲ್ಲಿ ಗುಂಡುಕುಟ್ಟಿ ಮಂಜುನಾಥಯ್ಯನವರ ಧರ್ಮಪತ್ನಿ ಮೀನಾಕ್ಷಿ ಅತ್ತೆ (ಯಜಮಾನರ ಚಿಕ್ಕಮ್ಮ) ಯಜಮಾನರಿಗೆ ಕೂಡಲೇ ಹೊರಟುಬರುವಂತೆ ಪತ್ರ ಬರೆದರು. ಅದರಂತೆ ಯಜಮಾನರು ಮಿಲಿಟರಿ ಬಿಟ್ಟು ಬಂದು ನಂತರ ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘ(ಅಡಿಕೆ ಸೊಸೈಟಿ)ಕ್ಕೆ ಕಾರ್ಯದರ್ಶಿಯಾಗಿ ಸೇರಿದರು.

> ಸೊಸೈಟಿಯಲ್ಲಿ ಕೂಲಿಕೆಲಸಗಾರರು ಮುಷ್ಕರ ಹೂಡಿದಾಗ ಅವರು ಅಡಿಕೆ ಗೋಣಿಚೀಲ ಹೊತ್ತದ್ದೂ ಇದೆ... ಯಾರಾದರೂ ಮನೆಗೆ ಬಂದಾಗ 'ಅವರು ಹೇಳಿದ್ದನ್ನು ಮಾತ್ರ ಕೇಳು' ಎಂದು ಹೇಳುತ್ತಿದ್ದರು.

ಅವರ ವಿಚಾರ ನಾನು ಬರೆದರೆ ಪ್ರಶಂಸೆಯಾದೀತು. ಯಜಮಾನರು ಅಡಿಕೆ ಸೊಸೈಟಿಯಲ್ಲಿ ಮೂವತ್ತು ವರ್ಷ ತುಂಬಾ ಶ್ರಮವಹಿಸಿ ಕೆಲಸಮಾಡಿದರು. ತನ್ನ ಆರೋಗ್ಯ ಲೆಕ್ಕಿಸದೆ ಅವಿಶ್ರಾಂತ ದುಡಿದರು. ಬೆಳಿಗ್ಗೆ 7 ಗಂಟೆಗೆ ಸೊಸೈಟಿಗೆ ಹೋದರೆ ಕತ್ತಲಾದ ಬಳಿಕ, ಕೆಲವೊಂದು ಸಲ ರಾತ್ರಿ 9 ಗಂಟೆಗೆ ವಾಪಾಸಾಗುತ್ತಿದ್ದರು. ಸೊಸೈಟಿಯಲ್ಲಿ ಕೂಲಿಕೆಲಸಗಾರರು ಮುಷ್ಕರ ಹೂಡಿದಾಗ ಅವರು ಅಡಿಕೆ ಗೋಣಿಚೀಲ ಹೊತ್ತದ್ದೂ ಇದೆ.

ಯಜಮಾನರು ಬಡವಿದ್ಯಾರ್ಥಿಗಳಿಗೆ ಧನಸಹಾಯ ನೀಡುತ್ತಿದ್ದರು. ಆದರೆ ತಾವು ನೀಡಿದ ಸಹಾಯಕ್ಕೆ ಅವರು ಎಂದೂ ಪ್ರತ್ಯುಪಕಾರ ಬಯಸುತ್ತಿರಲಿಲ್ಲ. ಅವರ ಜೀವನ ಬಹಳ ಸರಳವಾಗಿತ್ತು. ತುಂಬಾ ದಾಕ್ಷಿಣ್ಯದ ಸ್ವಭಾವ. ಮಕ್ಕಳಿಗೆ ಶಿಸ್ತಿನ ಜೀವನ ಕಲಿಸಲು ಗುರುವಾಗಿದ್ದರು. ನಮ್ಮ ಸಂಬಂಧಿಕರ ಮಕ್ಕಳನೇಕರು ನಮ್ಮಲ್ಲೇ ಇದ್ದು ಮಂಗಳೂರಿನ ಶಾಲಾಕಾಲೇಜುಗಳಲ್ಲಿ ಓದುತ್ತಿದ್ದರು. ಅವರನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಆಗ ಮಂಗಳೂರಿನಲ್ಲಿ ಹವ್ಯಕರ ಮನೆಗಳು ಕೇವಲ ಬೆರಳೆಣಿಕೆಯಷ್ಟಿದ್ದವು. ಸೊಸೈಟಿಗೆ ಅಡಿಕೆ ಹಾಕಿದವರಿಗೆ

ಮಧ್ಯಾಹ್ನ ಮನೆಯಲ್ಲೇ ಊಟ. ರಾತ್ರಿಯೂ ಇಲ್ಲಿಯೇ ವಸತಿ. ಅವರ ಒಳ್ಳೆಯ ಸ್ವಭಾವದಿಂದಾಗಿ ಅವರಿಗೆ ತುಂಬ ಜನರ ಪರಿಚಯವಿತ್ತು; ಎಲ್ಲರ ಪ್ರೀತಿಗೆ ಪಾತ್ರರಾಗಿದ್ದರು. ಯಾರಾದರೂ ಮನೆಗೆ ಬಂದಾಗ 'ಅವರು ಹೇಳಿದ್ದನ್ನು ಮಾತ್ರ ಕೇಳು' ಎಂದು ಹೇಳುತ್ತಿದ್ದರು.

ಯಜಮಾನರಿಗೆ ಹೂಗಿಡಗಳೆಂದರೆ ತುಂಬಾ ಇಷ್ಟ. ಜೇನುಸಾಕಣೆಯಲ್ಲೂ ಅವರಿಗೆ ವಿಶೇಷ ಆಸಕ್ತಿಯಿತ್ತು. ಸಿಲೋನಿನಿಂದ ಬಣ್ಣದ ಮೀನುಗಳನ್ನು ತರಿಸಿದ್ದರು. ಮನೆಯಂಗಳದಲ್ಲಿ ದೊಡ್ಡ ಪಂಜರ ಮಾಡಿಸಿ ಪಕ್ಷಿಗಳನ್ನು ಸಾಕುತ್ತಿದ್ದರು. ಅಲ್ಲದೆ ಸ್ಟಾಂಪ್ ಸಂಗ್ರಹದ ಅಭಿರುಚಿಯೂ ಇತ್ತು. ಇವನ್ನೆಲ್ಲ ನೋಡಲು ಅನೇಕರು ಬರುತ್ತಿದ್ದರು. ತಮ್ಮಲ್ಲಿದ್ದುದನ್ನು ಇತರರಿಗೆ ಉಚಿತವಾಗಿ ಹಂಚುವುದೆಂದರೆ ಅವರಿಗೆ ಖುಷಿ...

ಹೀಗೆ 62 ವರ್ಷ ನಾವು ಸಹಬಾಳ್ವೆ ನಡೆಸಿದೆವು. 2002ರ ಡಿಸೆಂಬರ್ 8ರ ಮಧ್ಯಾಹ್ನ ಯಜಮಾನರು ಸ್ವಾಮಿಪಾದ ಸೇರಿದರು. ಆ ದುಃಖ ತಡೆಯಲು ನನಗೆ ಸ್ವಾಮಿಯೇ ಧೈರ್ಯ ಕೊಟ್ಟರು.





**ಪರಮೇಶ್ವರಿ ಪೈಲೂರು**
ಪೈಲೂರು ಮನೆ
ವ್ಯಾಸರಾವ್ ಲೇನ್
ಮಂಗಳೂರು - 575 003



# ಪೈಲೂರು ಮನೆ

ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘದ ಕಾರ್ಯದರ್ಶಿಯಾಗಿ ಮಂಗಳೂರಿಗೆ ಬಂದ ಪೈಲೂರು ಲಕ್ಷ್ಮೀನಾರಾಯಣ ರಾವ್ ಆರಂಭದಲ್ಲಿ ಕರಂಗಲಪಾಡಿಯಲ್ಲಿ ಬಾಡಿಗೆ ಮನೆಯಲ್ಲಿದ್ದರು.



ಪೈಲೂರು ಮನೆ : 1950 - 51

1950 - 51ರ ಸುಮಾರಿಗೆ ಕದ್ರಿ ವ್ಯಾಸರಾವ್ ರಸ್ತೆಯಲ್ಲಿ ಸ್ವಂತ ಮನೆ ನಿರ್ಮಿಸಿದ ಅವರು 1970ರಲ್ಲಿ ಮನೆಯ ಮುಂಭಾಗವನ್ನು ನವೀಕರಿಸಿದರು.



ಪೈಲೂರು ಮನೆ - ನವೀಕರಣದ ಬಳಿಕ



# ಜೇನುಕೃಷಿಯ ಪ್ರಗತಿಗಾಗಿ ಜೇನ್ನೊಣದಂತೆ ಪರಿಶ್ರಮ

• ಕೋಟೆ ಲಕ್ಷ್ಮೀನಾರಾಯಣ

ನಮ್ಮ ಜಿಲ್ಲೆಯಲ್ಲಿ ಜೇನುಕೃಷಿಯ ವಿಷಯ ಪ್ರಸ್ತಾಪಿಸಲ್ಪಟ್ಟಾಗ ಪ್ರಥಮವಾಗಿ ನೆನಪಿಗೆ ಬರುವ ಹೆಸರು ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರದ್ದು. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಧುನಿಕ ರೀತಿಯ ಜೇನುಕೃಷಿಯ ಆರಂಭ ಮತ್ತು ಬೆಳವಣಿಗೆಯಲ್ಲಿ ಅವರು ಪ್ರಮುಖ ಪಾತ್ರ ವಹಿಸಿದವರು.

ಪ್ರಾಚೀನ ಕಾಲದಲ್ಲಿ ಜನರು ಜೇನಿನ ರುಚಿ, ಗುಣ ಮತ್ತು ಉಪಯೋಗದ ಬಗ್ಗೆ ತಿಳಿದಿದ್ದರೂ ಜೇನುಸಾಕಣೆಯ ಕುರಿತು ತಿಳಿದಿರಲಿಲ್ಲ. ಜೇನುಕುಟುಂಬಗಳು ಅಧಿಕ ಜೇನು ದಾಸ್ತಾನಿಡುತ್ತಿದ್ದ ಕಾಲವನ್ನರಿತು ಈ ಸಂದರ್ಭದಲ್ಲಿ ಜನರು ಕಾಡಿನಲ್ಲಿ ಓಡಾಡಿ ಜೇನುಕುಟುಂಬಗಳನ್ನು ಹುಡುಕುತ್ತಿದ್ದರು. ಬಳಿಕ ಜೇನುಕುಟುಂಬಗಳಿಗೆ ಹೊಗೆ ತಾಗಿಸುವ ಮೂಲಕ ಜೇನುನೊಣಗಳನ್ನೋಡಿಸಿ ಎರಿಗಳನ್ನು ತೆಗೆದು ಕೈಯಿಂದ ಹಿಂಡಿ ಜೇನು ಸಂಗ್ರಹಿಸುತ್ತಿದ್ದರು. ಇಂತಹ ವೇಳೆಯಲ್ಲಿ ಕೆಲವೊಮ್ಮೆ ಬೆಂಕಿಯ ಶಾಖ ತಗುಲಿ ಜೇನುಕುಟುಂಬಗಳೇ ನಾಶವಾಗುತ್ತಿದ್ದವು. ಪ್ರಪಂಚದಾದ್ಯಂತ ಸಾವಿರಾರು ವರ್ಷಗಳಿಂದ ಇದೇ ರೀತಿ ಹಿಂಸಾತ್ಮಕ ವಿಧಾನದಿಂದ ಜೇನು ಸಂಗ್ರಹಿಸಲಾಗುತ್ತಿತ್ತು.

ಕ್ರಮೇಣ (ಕಳೆದ ಶತಮಾನದ ಆರಂಭದಲ್ಲಿ) ಪರಿಸ್ಥಿತಿ ಬದಲಾಗತೊಡಗಿತು. ಸ್ವಾಭಾವಿಕವಾಗಿ ಮರದ ಪೊಟರೆ, ಹುತ್ತ ಇತ್ಯಾದಿಗಳಲ್ಲಿ ವಾಸಿಸುವ ತೊಡುವೆ ಜೇನುಕುಟುಂಬಗಳು ಟೊಳ್ಳಾಗಿರುವ ಮರದ ದಿಮ್ಮಿ ಮತ್ತು ಮಡಿಕೆ ಇತ್ಯಾದಿಗಳಲ್ಲಿ ವಾಸಿಸಬಹುದೆಂದು ಅಂದಾಜಿಸಿದ ಜನರು ಮಡಿಕೆಗಳಲ್ಲೂ, ಮರದ ದಿಮ್ಮಿ ಮತ್ತು

ಮರದ ಪೆಟ್ಟಿಗೆಗಳಲ್ಲೂ ಜೇನುಕುಟುಂಬಗಳು ನೆಲೆಸುವಂತೆ ಮಾಡಿ ಅವುಗಳಿಂದ ಜೇನು ಸಂಗ್ರಹಿಸತೊಡಗಿದರು. ಈ ವಿಧಾನದಲ್ಲಿ ವರ್ಷಕ್ಕೊಮ್ಮೆ ಅಥವಾ ಎರಡು ಬಾರಿ ಮಾತ್ರ ಜೇನು ಸಂಗ್ರಹಿಸಲು ಸಾಧ್ಯವಾಗುತ್ತಿತ್ತು. ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಸುಮಾರು 80 ವರ್ಷಗಳ ಹಿಂದೆ ಮಡಿಕೆಗಳಲ್ಲಿ, ಬೈನೆ ಮರದ ದಿಮ್ಮಿಗಳಲ್ಲಿ ಮತ್ತು ಮರದ ಪೆಟ್ಟಿಗೆಗಳಲ್ಲಿ ಜೇನುಸಾಕಣೆ ಮಾಡುತ್ತಿದ್ದರು. ಅಂತಹ ಕೆಲವೇ ಮನೆಗಳಲ್ಲಿ ಈಗಿನ ಕೋಟೆ ಸಹೋದರರ ಹಿರಿಯರ ಮನೆಯೂ ಒಂದಾಗಿತ್ತೆಂದು ಪೈಲೂರು ಅವರು ಆಗಾಗ ನೆನಪಿಸುತ್ತಿದ್ದರು.

ನಂತರ ಕೆಲವು ವರ್ಷಗಳಲ್ಲಿ ವಿದೇಶಗಳಲ್ಲಿ ಶಾಸ್ತ್ರೀಯ ಜೇನುಸಾಕಣೆ ಶುರುವಾದದ್ದನ್ನು ಪತ್ರಿಕೆಗಳ ಮೂಲಕ ತಿಳಿದ ಕಂಜರ್ಪಣೆ ಗೋಪಾಲಕೃಷ್ಣಯ್ಯ ಮತ್ತು ಪೈಲೂರು ನಾರಾಯಣ ಅವರು, ಪೈಲೂರು ಲಕ್ಷ್ಮೀನಾರಾಯಣ ರಾವ್, ಪೈಲೂರು ಶಿವರಾಮಯ್ಯ, ಪೈಲೂರು ಕೃಷ್ಣಯ್ಯ ಮೊದಲಾದವರ ಸಹಕಾರದಿಂದ ಇಲ್ಲಿಯೂ ಆಧುನಿಕ ಜೇನುವ್ಯವಸಾಯ ಆರಂಭಿಸಿದರು. ಮೊದಮೊದಲು ಜೇನುಕುಟುಂಬಗಳನ್ನು ಪೆಟ್ಟಿಗೆಯೊಳಗೆ ನಿಲ್ಲಿಸಿಕೊಳ್ಳಲು ಕಷ್ಟವಾಗುತ್ತಿದ್ದರೂ ಕೊನೆಗೆ ಯಶಸ್ಸು ಗಳಿಸಿದರಂತೆ. ಬಳಿಕ ತಮ್ಮ ಅನುಭವಗಳನ್ನು ಇತರರಿಗೂ ತಿಳಿಸಿ ಅವರೂ ಜೇನುಸಾಕಣೆ ಕೈಗೊಳ್ಳುವಂತೆ ಪ್ರೇರೇಪಿಸತೊಡಗಿದರು. ಜೇನುನೊಣಗಳ ಕಡಿತಕ್ಕೆ ಅಂಜಿ ದೂರ ಸರಿದವರೂ ಅವುಗಳ ಸ್ವಭಾವವನ್ನರಿತ ಮೇಲೆ ಜೇನುಸಾಕಣೆಗೆ ಮುಂದಾದರು.




**ಜೇನುಸಂಘದ ಸ್ಥಾಪನೆ**

ಕೆಲವು ಸಮಯದ ಬಳಿಕ ಜೇನುಕೃಷಿ ಮುನ್ನಡೆಗೆ ಸಂಘಟಿತ ಪ್ರಯತ್ನದ ಅಗತ್ಯವನ್ನು ಮನಗಂಡು ಊರವರೊಂದಿಗೆ ವಿಚಾರ ವಿನಿಮಯ ನಡೆಸಿ ಸಹಕಾರಿ ಸಂಸ್ಥೆಯ ಸ್ಥಾಪನೆಗೆ ಮುಂದಾದರು. ಆ ಕಾಲದ ಸಹಕಾರಿ ಕ್ಷೇತ್ರದ ಮುಂದಾಳು, ಖ್ಯಾತ ನ್ಯಾಯವಾದಿ ಮೊಳಹಳ್ಳಿ ಶಿವರಾಯರ ಮಾರ್ಗದರ್ಶನ ಪಡೆದು 21.5.1938ರಂದು ಚೊಕ್ಕಾಡಿಯಲ್ಲಿ 'ಪುತ್ತೂರು ತಾಲೂಕು ಸಹಕಾರಿ ಜೇನುವ್ಯವಸಾಯ, ಜೇನುಸಂಗ್ರಹ ಮತ್ತು ಮಾರಾಟ ಸಂಘ' ಸ್ಥಾಪನೆಯಾಯಿತು. ಶಾಸ್ತ್ರೀಯ ಜೇನುವ್ಯವಸಾಯದ ಕುರಿತು ಮಾಹಿತಿ ನೀಡುವುದು, ಜೇನುಕೃಷಿಗೆ ಅಗತ್ಯವಿರುವ ಎಲ್ಲ ಉಪಕರಣಗಳನ್ನೊದಗಿಸುವುದು ಮತ್ತು ಕ್ರಮಬದ್ಧವಾಗಿ ಸಂಗ್ರಹಿಸಿದ ಜೇನನ್ನು ಖರೀದಿಸಿ ಯೋಗ್ಯ ಬೆಲೆಗೆ ಮಾರಾಟಮಾಡುವುದು ಸಂಘದ ಪ್ರಮುಖ ಉದ್ದೇಶಗಳಾಗಿದ್ದವು. ಇದಕ್ಕಾಗಿ ಸಂಘದ ಸ್ಥಾಪಕ ಆಡಳಿತ ಮಂಡಳಿಯ ಸದಸ್ಯರು ಉತ್ಸಾಹದಿಂದ ಶ್ರಮಿಸಿದ್ದರು. ಆಗ ಸಂಸ್ಥೆಗೆ ಸ್ವಂತ ಕಾರ್ಯಾಲಯವಿಲ್ಲದ್ದರಿಂದ ಸಂಘದ ಸಭೆಗಳು ಹೆಚ್ಚಾಗಿ ಲಕ್ಷ್ಮೀನಾರಾಯಣ ರಾಯರ ಮಿತ್ತಮಜಲು ಮನೆಯಲ್ಲೇ ಜರಗುತ್ತಿದ್ದವು. ಅವರ ಅಣ್ಣ ಪೈಲೂರು ಮಹಾಬಲೇಶ್ವರಯ್ಯನವರು ಮನೆಯ ಯಜಮಾನರಾಗಿದ್ದು ಕೃಷಿ ಕಾರ್ಯಗಳನ್ನು ಉತ್ತಮ ರೀತಿಯಲ್ಲಿ ನಿರ್ವಹಿಸುತ್ತಿದ್ದುದಲ್ಲದೆ ಜೇನುಕೃಷಿಗೂ ಪ್ರೋತ್ಸಾಹಕರಾಗಿದ್ದರು. ಇವರ ಪೈಕಿ ಕೊನೆಯವರು ಉತ್ಸಾಹಿ ಕೃಷಿಕ ಪೈಲೂರು ಶಿವರಾಮಯ್ಯನವರು. ಇವರು ಸಂಘದ ಪ್ರಥಮ ಕಾರ್ಯದರ್ಶಿಗಳಾಗಿ, ಜೇನುಕೃಷಿ ಪ್ರಚಾರಕರಾಗಿ ಕಾರ್ಯನಿರ್ವಹಿಸಿದ್ದರು.

> ನಮ್ಮ ಜಿಲ್ಲೆಯಲ್ಲಿ ಜೇನುಕೃಷಿಯ ವಿಷಯ ಪ್ರಸ್ತಾಪಿಸಲ್ಪಟ್ಟಾಗ ಪ್ರಥಮವಾಗಿ ನೆನಪಿಗೆ ಬರುವ ಹೆಸರು ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರದ್ದು. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಧುನಿಕ ರೀತಿಯ ಜೇನುಕೃಷಿಯ ಆರಂಭ ಮತ್ತು ಬೆಳವಣಿಗೆಯಲ್ಲಿ ಅವರು ಪ್ರಮುಖ ಪಾತ್ರ ವಹಿಸಿದವರು.

ಜೇನುಕೃಷಿ ತಜ್ಞರಾಗಿದ್ದ ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರು ಸಂಘದ ವ್ಯವಹಾರ ಕ್ಷೇತ್ರದ ವಿವಿಧ ಭಾಗಗಳಲ್ಲಿ ಜೇನುಕೃಷಿ ತರಬೇತಿ ಶಿಬಿರಗಳನ್ನು ನಡೆಸಿ ಆಸಕ್ತರಿಗೆ ಮಾಹಿತಿಯನ್ನೊದಗಿಸುತ್ತಿದ್ದರು. 1944ರಲ್ಲಿ ಇವರು ಬರೆದು, ಸಂಘದಿಂದ ಪ್ರಕಟಿಸಲ್ಪಟ್ಟ 'ಜೇನಿನ ವ್ಯವಸಾಯ' ಪುಸ್ತಕ ಅನೇಕ ಮಂದಿ ಜೇನುಕೃಷಿಯಲ್ಲಿ ತೊಡಗಲು ಕಾರಣವಾಯಿತು. ಮದ್ರಾಸಿನಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನದಲ್ಲಿ ಬಹುಮಾನ ಗಳಿಸಿದ ಈ

ಪುಸ್ತಕದ ಕೆಲವು ಭಾಗಗಳನ್ನು ಪಠ್ಯ ಪುಸ್ತಕದಲ್ಲೂ ಅಳವಡಿಸಲಾಗಿತ್ತೆಂಬುದು ಗಮನಾರ್ಹ. (ಈ ಪುಸ್ತಕ ನಾಲ್ಕು ಬಾರಿ ಮರುಮುದ್ರಣ ಕಂಡಿದೆ.)

ದಿಲ್ಲಿಯಲ್ಲಿ ಜರುಗಿದ ಅಖಿಲ ಭಾರತ ಜೇನುಕೃಷಿಕರ ಪರಿಷತ್ತಿನಲ್ಲಿ ಸಂಘದ ಪ್ರತಿನಿಧಿಯಾಗಿ ಪೈಲೂರು ಅವರು ಭಾಗವಹಿಸಿದ್ದರು. 1942-43ರ ಅವಧಿಯಲ್ಲಿ ಮಂಗಳೂರಿನಲ್ಲಿ ಜರುಗಿದ ಅಖಿಲ ಭಾರತ ಜೇನುವ್ಯವಸಾಯಗಾರರ ಸಮ್ಮೇಳನ ಮತ್ತು ಜೇನುಕೃಷಿ ಪ್ರದರ್ಶನ ಯಶಸ್ವಿಯಾಗಲು ಇವರು ಕಾರಣಕರ್ತರಾಗಿದ್ದರು. ಅದೇ ಸಂದರ್ಭದಲ್ಲಿ ಮಂಗಳೂರಿಗೆ ಆಗಮಿಸಿದ್ದ ದೇಶದ ಮಹಾನ್ ನೇತಾರ ಚಕ್ರವರ್ತಿ ರಾಜಗೋಪಾಲಾಚಾರಿ ಅವರು ಜೇನುಗೂಡೊಂದನ್ನು ವೀಕ್ಷಿಸಿ ಜನರೂ ಜೇನುನೊಣಗಳಂತೆ ಒಗ್ಗಟ್ಟು ಹಾಗೂ ಶಿಸ್ತಿನಿಂದ ಕ್ರಿಯಾಶೀಲರಾಗಬೇಕೆಂಬ ಅನಿಸಿಕೆ ವ್ಯಕ್ತಪಡಿಸಿದ್ದನ್ನು ಪೈಲೂರು ಅವರು ಅನೇಕ ಸಂದರ್ಭಗಳಲ್ಲಿ ಪ್ರಸ್ತಾಪಿಸುತ್ತಿದ್ದರು.

ಸಂಶೋಧನೆಯಲ್ಲಿ ಪೈಲೂರು ಅವರಿಗೆ ವಿಶೇಷ ಆಸಕ್ತಿ. ಜೇನುಕುಟುಂಬಗಳು ಹೆಚ್ಚು ಪಾಲುಗಳಾಗದಂತೆ ತಡೆದು ಅವುಗಳನ್ನು ಬಲಿಷ್ಠಗೊಳಿಸಲು ಹಾಗೂ ತಳಿಸುಧಾರಣೆ ಮಾಡುವತ್ತ ಅವರು ಹೆಚ್ಚಿನ ಗಮನ ಹರಿಸುತ್ತಿದ್ದರು. ಆಗ ನನ್ನ ತಂದೆಯವರು ಹಳೆಯ ಪದ್ಧತಿಯಲ್ಲಿ ಜೇನುಕೃಷಿ ಮಾಡುತ್ತಿದ್ದರು. ಮಡಿಕೆ, ಬೈನೆ ಮರದ ದಿಮ್ಮಿ ಮತ್ತು ಮರದ ಪೆಟ್ಟಿಗೆಗಳಲ್ಲಿ 8-10 ಜೇನುಕುಟುಂಬಗಳಿದ್ದವು. ಹೆಚ್ಚಿನ ಕುಟುಂಬಗಳು ಬಲಿಷ್ಠವಾಗಿದ್ದು, ಅಧಿಕ ಜೇನು ಉತ್ಪಾದಿಸುತ್ತಿದ್ದವು. ಆ ಪೈಕಿ ಸುಮಾರು 1.45 ಅಡಿ ಉದ್ದ, 1.25 ಅಡಿ ಅಗಲ, 1 ಅಡಿ ಎತ್ತರವಿದ್ದ, ಹಳೆಯ ಮಾದರಿಯ ದೊಡ್ಡ ಗಾತ್ರದ ಮರದ ಪೆಟ್ಟಿಗೆಯಲ್ಲಿ ಎಂಟು ವರ್ಷಗಳಿಂದ ವಾಸವಾಗಿದ್ದ ದೊಡ್ಡ ಜೇನು ಕುಟುಂಬವು ಅತ್ಯುತ್ತಮವಾಗಿತ್ತು. ಪಾಲಾಗುತ್ತಿದ್ದುದು ವಿರಳ. ದೊಡ್ಡ ದೊಡ್ಡ ಎರಿಗಳಿಂದ ಪೆಟ್ಟಿಗೆ ತುಂಬಿಕಾಣುತ್ತಿತ್ತು. ಜೇನುಕುಟುಂಬದ ಮಳೆಗಾಲದ ಖರ್ಚಿಗೆ ಸಾಕಷ್ಟು ಜೇನನ್ನು ಕೆಲವು ಎರಿಗಳಲ್ಲಿ ಉಳಿಸಿ ಅರ್ಧಾಂಶ ಎರಿಗಳನ್ನು ಮಾತ್ರ ತೆಗೆಯುತ್ತಿದ್ದರೂ ವಾರ್ಷಿಕ ಸುಮಾರು 30 ಕುಡ್ತೆ ಜೇನು ಸಂಗ್ರಹವಾಗುತ್ತಿತ್ತು. ಈ ತಳಿ ವೃದ್ಧಿಸುವ ಸಲುವಾಗಿ ಪೈಲೂರು ಅವರು ನಮ್ಮಲ್ಲಿಗೆ ಬಂದು ರಾಣಿಕಣಗಳನ್ನು ತೆಗೆದುಕೊಂಡು ಹೋಗಿದ್ದರು.



ಮರದ ಪೆಟ್ಟಿಗೆಯಲ್ಲಿ ಶಾಸ್ತ್ರೀಯ ಜೇನುವ್ಯವಸಾಯ.

**ಸಂಘದ ಮುನ್ನಡೆಗೆ ಪರಿಶ್ರಮ**

ಜೇನುಕೃಷಿಯನ್ನು ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ವಿಸ್ತರಿಸುವ ಉದ್ದೇಶದಿಂದ 26.10.1946ರಂದು ಸಂಘದ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಸಂಸ್ಥೆಯ ಹೆಸರನ್ನು 'ದ.ಕ. ಜೇನುವ್ಯವಸಾಯ, ಜೇನುಸಂಗ್ರಹ ಮತ್ತು ಮಾರಾಟ ಸಂಘ' ಎಂದು ಮಾರ್ಪಡಿಸಲಾಯಿತು. ಅನಂತರ 1971-72ರಲ್ಲಿ ಸಂಘಕ್ಕೆ 'ದ.ಕ. ಜೇನುವ್ಯವಸಾಯಗಾರರ ಸಹಕಾರಿ ಸಂಘ' ಎಂದು ಮರುನಾಮಕರಣ ಮಾಡಲಾಯಿತು.

1946ರಿಂದ 1954ರ ತನಕ ಜೇನುಸಂಘದ ಗೌರವ ಕಾರ್ಯದರ್ಶಿಯಾಗಿಯೂ, 1954ರಿಂದ 1960ರ ವರೆಗೆ ಸಂಘದ ಅಧ್ಯಕ್ಷರಾಗಿಯೂ ಸಮರ್ಥವಾಗಿ ಕಾರ್ಯನಿರ್ವಹಿಸಿದ ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರು ಸಂಸ್ಥೆ ಹಾಗೂ ಜೇನುಕೃಷಿಯ ಅಭಿವೃದ್ಧಿಗೆ ಗಣನೀಯ ಸೇವೆ ಸಲ್ಲಿಸಿದ್ದಾರೆ.

1954ರಿಂದ ಅಖಿಲ ಭಾರತ ಖಾದಿ ಮತ್ತು ಗ್ರಾಮೋದ್ಯೋಗ ಆಯೋಗದಿಂದ ಜೇನುಕೃಷಿ ಅಭಿವೃದ್ಧಿಗೆ ವಿವಿಧ ರೀತಿಯ ಸಹಾಯಧನ ದೊರಕಲಾರಂಭವಾಯಿತು. ಈ ಸಂದರ್ಭದಲ್ಲಿ ಅಖಿಲ ಭಾರತ ಖಾದಿ ಮತ್ತು ಗ್ರಾಮೋದ್ಯೋಗ ಆಯೋಗದ ಜೇನುಕೃಷಿ ವಿಭಾಗದ ನಿರ್ದೇಶಕರಾಗಿದ್ದ ಧಾರವಾಡದ ಎಸ್.ಕೆ. ಕಲ್ಲಾಪುರ ಅವರು ಜೇನುಕೃಷಿ ಅಭಿವೃದ್ಧಿಗೆ ವಿವಿಧ ಯೋಜನೆ ರೂಪಿಸಿ ಜೇನುವ್ಯವಸಾಯಗಾರರ ಸಹಕಾರಿ ಸಂಘಗಳ ಮೂಲಕ ಕಾರ್ಯಗತಗೊಳಿಸಲು ಅಹರ್ನಿಶಿ ಶ್ರಮಿಸಿದರು.

ಜೇನುಕೃಷಿಯ ಮಾಹಿತಿಯನ್ನೊದಗಿಸಲು ಅಲ್ಲಲ್ಲಿ ಕ್ಷೇತ್ರ ಕಾರ್ಯಕರ್ತರನ್ನು (ಫೀಲ್ಡ್‌ಮೆನ್) ಹಾಗೂ ಮೇಲ್ವಿಚಾರಕರನ್ನು (ಎಪಿಯರಿಸ್ಟ್) ನೇಮಿಸಲು ಅವಕಾಶ ಕಲ್ಪಿಸಿದ್ದಲ್ಲದೆ ಜೇನುಪೆಟ್ಟಿಗೆ, ಜೇನು ತೆಗೆಯುವ ಯಂತ್ರಗಳಿಗೆ ಸಹಾಯಧನ ಸೌಲಭ್ಯಗಳನ್ನು ಒದಗಿಸಿದ್ದರು. ಸಿಗುತ್ತಿದ್ದ ಸೌಲಭ್ಯಗಳನ್ನೆಲ್ಲ ಸಂಘದ ಮೂಲಕ ಪಡೆದು ಜೇನುಕೃಷಿಕರಿಗೆ ಒದಗಿಸಲು ಪೈಲೂರು ಅವರು ಉತ್ಸಾಹದಿಂದ ಕಾರ್ಯನಿರ್ವಹಿಸಿದ್ದರು. 1957ರಲ್ಲಿ ಜೇನುಸಂಘದಿಂದ ಆರಂಭವಾದ 'ಮಧುವನ' ಮಾಸಪತ್ರಿಕೆಯ ಸಂಪಾದಕರಾಗಿದ್ದ ಅವರು, ಈ ಪತ್ರಿಕೆಯ ಮೂಲಕವೂ ಜೇನು ವ್ಯವಸಾಯದ ಕುರಿತು ಜನಜಾಗೃತಿಗೆ ಪ್ರಯತ್ನಿಸಿದ್ದರು.




1946ರಿಂದ 1954ರ ತನಕ ಜೇನುಸಂಘದ ಗೌರವ ಕಾರ್ಯದರ್ಶಿಯಾಗಿಯೂ, 1954ರಿಂದ 1960ರವರೆಗೆ ಸಂಘದ ಅಧ್ಯಕ್ಷರಾಗಿಯೂ ಸಮರ್ಥವಾಗಿ ಕಾರ್ಯನಿರ್ವಹಿಸಿದ ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರು ಸಂಸ್ಥೆ ಹಾಗೂ ಜೇನುಕೃಷಿಯ ಅಭಿವೃದ್ಧಿಗೆ ಗಣನೀಯ ಸೇವೆ ಸಲ್ಲಿಸಿದ್ದಾರೆ.

ಮಂಗಳೂರಿನಲ್ಲಿ ಜೇನುವ್ಯವಸಾಯ ಕ್ಷೇತ್ರ ಕಚೇರಿ ತೆರೆಯಲ್ಪಟ್ಟಾಗ ಎಸ್.ಎಂ. ಭಟ್ಟರು ಮೇಲ್ವಿಚಾರಕರಾಗಿ ಹಾಗೂ ಆರ್.ಎಂ. ಜೋಶಿ ಅವರು ಹಿರಿಯ ಕಾರ್ಯಕರ್ತರಾಗಿ ನೇಮಕಗೊಂಡರು. ಸಿ. ನರಸಿಂಹ ರಾವ್ ಸಂಘದ ವ್ಯವಸ್ಥಾಪಕರಾಗಿ ನೇಮಕಗೊಂಡರು. ಜಿಲ್ಲೆಯಾದ್ಯಂತ ಅಲ್ಲಲ್ಲಿ ಜೇನುಕೃಷಿ ಉಪಕೇಂದ್ರಗಳು ತೆರೆಯಲ್ಪಟ್ಟವು. ಪ್ರತಿ ಉಪಕೇಂದ್ರದಲ್ಲೂ ಒಬ್ಬೊಬ್ಬ ಕಾರ್ಯಕರ್ತರಿದ್ದು, ಆ ಭಾಗದ ಜನರಿಗೆ ಜೇನುಕೃಷಿ ಕುರಿತ ಮಾಹಿತಿ ನೀಡುತ್ತಿದ್ದರು. ಉಪಕೇಂದ್ರಗಳು ಹೆಚ್ಚುತ್ತಾ ಹೋಗಿ ಒಂದು ಕಾಲದಲ್ಲಿ ಅವುಗಳ ಸಂಖ್ಯೆ 35ಕ್ಕೆ ತಲುಪಿತ್ತು. ಇದರೊಂದಿಗೆ ಕೆಲವೆಡೆ ಮಾದರಿ ಕೇಂದ್ರಗಳು ಮತ್ತು ಬೀ ಕ್ಲಬ್‌ಗಳು ತೆರೆಯಲ್ಪಟ್ಟು ಜನರಿಗೆ ಪ್ರತ್ಯಕ್ಷ ಮಾಹಿತಿ ನೀಡುವ ಕಾರ್ಯವೂ ನಡೆಯುತ್ತಿತ್ತು. ಆ ಸಂದರ್ಭದಲ್ಲಿ ಉಡುಪಿ ಮತ್ತು ಪುತ್ತೂರಿನಲ್ಲಿ ಕ್ಷೇತ್ರ ಕಚೇರಿ ತೆರೆಯಲ್ಪಟ್ಟಿತು.

ಪೈಲೂರು ಅವರು ಸಂಘದ ವತಿಯಿಂದ ಎಪಿಯರಿಸ್ಟ್ ಮತ್ತು ಫೀಲ್ಡ್‌ಮನ್‌ಗಳ ಸಭೆಗಳನ್ನು ಆಗಾಗ ಏರ್ಪಡಿಸಿ ಅವರ ಕಾರ್ಯಚಟುವಟಿಕೆಗಳನ್ನು ಪರಿಶೀಲಿಸಿ, ಉದ್ದೇಶಿತ ಗುರಿಸಾಧನೆಗೆ ಉತ್ಸಾಹದಿಂದ ಶ್ರಮಿಸುವಂತೆ ಸೂಕ್ತ ಮಾರ್ಗದರ್ಶನ ನೀಡುತ್ತಿದ್ದರು. ಜೇನುಪೆಟ್ಟಿಗೆಗಳ ಅಳತೆ ಮತ್ತು ಗುಣಮಟ್ಟ ಸೂಕ್ತವಾಗಿರುವಂತೆ ಪೆಟ್ಟಿಗೆ ತಯಾರಕರನ್ನು ಸದಾ ಎಚ್ಚರಿಸುತ್ತಿದ್ದರು. ಧಾರವಾಡದಲ್ಲಿ, ಮಂಗಳೂರಿನ ಜೆಪ್ಪು ಸೆಮಿನರಿಯಲ್ಲಿ ಹಾಗೂ ಕೇರಳದ ವಿ.ಪಿ. ರಾಮನ್ ತಯಾರಿಸುತ್ತಿದ್ದ ಜೇನುಪೆಟ್ಟಿಗೆಗಳು ಆ ಕಾಲದಲ್ಲಿ ಯೋಗ್ಯವಾಗಿದ್ದವು.

## ನಿರಂತರ ಪ್ರೋತ್ಸಾಹ

ಪೈಲೂರು ಅವರು ಜೇನುಸಂಘದ ಅಧ್ಯಕ್ಷಸ್ಥಾನದಿಂದ ನಿವೃತ್ತರಾದ ಬಳಿಕವೂ ಜೇನುಕೃಷಿ ಹಾಗೂ ಸಂಘದ ಮುನ್ನಡೆಗೆ ಸೂಕ್ತ ಸಲಹೆ ಸೂಚನೆಗಳನ್ನು ನೀಡುತ್ತಿದ್ದರು. ಇತರರ ಉತ್ತಮ ಕಾರ್ಯವನ್ನು ಮೆಚ್ಚುವ ಒಳ್ಳೆಯತನ ಅವರಲ್ಲಿತ್ತು. 1965ರಲ್ಲಿ ನಾನು ಸಂಘದ ಅಧ್ಯಕ್ಷನಾದಾಗ ಸಂತೋಷದಿಂದ ಶುಭ ಹಾರೈಸಿದ್ದರು. ಮುಂದೆ ಸಂಘದ ವತಿಯಿಂದ 'ಮಧುಪ್ರಪಂಚ', 'ಸ್ಥಳಾಂತರ ಜೇನುಕೃಷಿ', 'ಮಾಧುರಿ' ಪುಸ್ತಕಗಳ ಬಿಡುಗಡೆಯಾದಾಗ, ಮಧುಸಪ್ತಾಹ ಆಚರಿಸಿದಾಗ, 'ಮಧುಪ್ರಪಂಚ' ತ್ರೈಮಾಸಿಕದ ಪ್ರಕಟಣೆ ಹಾಗೂ ಜೇನುಸಂಘ ಸ್ವಂತ ಕಟ್ಟಡವನ್ನು ಹೊಂದಿದಾಗ - ಹೀಗೆ ಅನೇಕ ಸಂದರ್ಭಗಳಲ್ಲಿ ಮೆಚ್ಚುಗೆ ಸೂಚಿಸಿ ಪ್ರೋತ್ಸಾಹಿಸಿದ್ದರು. ನನಗಿಂತ ಹಿಂದೆ ಮತ್ತು ನನ್ನ ನಂತರ ಸಂಸ್ಥೆಯ ಅಧ್ಯಕ್ಷರಾಗಿ, ಗೌರವ ಕಾರ್ಯದರ್ಶಿಗಳಾಗಿ, ಕಾರ್ಯದರ್ಶಿಗಳಾಗಿ ಹಾಗೂ ಇತರ ಜವಾಬ್ದಾರಿ ಸ್ಥಾನಗಳಲ್ಲಿದ್ದವರೆಲ್ಲರೂ ಪೈಲೂರು ಅವರ ಪ್ರೀತಿಗೆ ಪಾತ್ರರಾಗಿದ್ದರು.

ಜೇನುಕೃಷಿ ಕುರಿತು ಪೈಲೂರು ಹಾಗೂ ಎಸ್.ಕೆ. ಕಲ್ಲಾಪುರ ಅವರ ಸಾಧನೆಯನ್ನು ಗೌರವಿಸಿ 1976ರಲ್ಲಿ ಜೇನುಸಂಘದ ವತಿಯಿಂದ ಅವರಿಬ್ಬರನ್ನು ಸನ್ಮಾನಿಸಲಾಯಿತು. ಇದೀಗ ಎರಡು ವರ್ಷಗಳ ಹಿಂದೆ ಪೈಲೂರು ಅವರ ಬಹುಮುಖ ಪ್ರತಿಭೆಯನ್ನು ಗುರುತಿಸಿ, ಪಂಜ ಸೀಮಾ ಹವ್ಯಕ ಮಹಾಸಭಾದ ವತಿಯಿಂದ, ನಿವೃತ್ತ ಸಹಾಯಕ ಶಿಕ್ಷಣಾಧಿಕಾರಿ ಎಸ್.ಜಿ. ಕೃಷ್ಣ ಅವರು ತಮ್ಮ ತಂದೆ ವೇ.ಮೂ. ಲಷ್ಕರಿ ಕೇಶವ ಭಟ್ಟರ ಜನ್ಮಶತಾಬ್ದಿ ನೆನಪಿಗಾಗಿ ಸ್ಥಾಪಿಸಿದ 'ಲಷ್ಕರಿ ಪ್ರಶಸ್ತಿ'ಯನ್ನು ನೀಡಿ ಸನ್ಮಾನಿಸಲಾಗಿತ್ತು.

ಕಳೆದ ವರ್ಷ ಪೈಲೂರು ಅವರ ಆರೋಗ್ಯ ಉತ್ತಮವಿಲ್ಲವೆಂದು ತಿಳಿದು ನಾವು ಕೆಲವರು ನೋಡಲು ಹೋಗಿದ್ದೆವು. ಆಗಲೂ ಅವರು ಬರೆಯುವುದರಲ್ಲಿ ಮಗ್ನರಾಗಿದ್ದರು. ಅದು ಜೇನುಕೃಷಿ ಕುರಿತ ಲೇಖನ. ಆ ಲೇಖನಗಳನ್ನು ನನ್ನ ಕೈಗಿತ್ತು - ಮರೆವಿನಿಂದಾಗಿ ವಿಷಯಗಳು ಹಿಂದುಮುಂದಾಗಿದ್ದರೆ ಸರಿಪಡಿಸಿ ಪತ್ರಿಕೆಗೆ ಕಳುಹಿಸಬೇಕೆಂದಿದ್ದರು. ನನಗೆ ತಿಳಿದಂತೆ ಅದು ಅವರು ಬರೆದ ಕೊನೆಯ ಲೇಖನವಾಗಿತ್ತು. ಆ ಲೇಖನ ಇತ್ತೀಚೆಗೆ ಜೇನುವ್ಯವಸಾಯಗಾರರ ಸಹಕಾರಿ ಸಂಘ ಪ್ರಕಟಿಸಿದ 'ಮಧುಪ್ರಪಂಚ' ವಜ್ರಮಹೋತ್ಸವ ಸಂಚಿಕೆಯಲ್ಲಿ ಪ್ರಕಟಿಸಲ್ಪಟ್ಟಿದೆ. ಆ ಲೇಖನದಲ್ಲಿ ಅವರು ಜೇನುಕೃಷಿ ಮುನ್ನಡೆಯಲು ಸೂಕ್ತವಾದ ಕೆಲವು ಸೂಚನೆಗಳನ್ನಿತ್ತಿದ್ದಾರೆ. ಅವುಗಳನ್ನು ಅನುಷ್ಠಾನಕ್ಕೆ ತರಬೇಕಾದ್ದು ಜೇನುಸಂಘ ಹಾಗೂ ನಮ್ಮೆಲ್ಲರ ಕರ್ತವ್ಯ.

◆




**ಕೋಟೆ ಲಕ್ಷ್ಮೀನಾರಾಯಣ**
ಕಳಂಜ - 574 212
ಸುಳ್ಯ ತಾಲೂಕು, ದಕ್ಷಿಣ ಕನ್ನಡ



# ಜೇನಿಗಾಗಿ ಜೀವನ: ಜೇನಿನಂಥ ಜೀವನ

- ವೈ. ಮಹಾಬಲ ಭಟ್, ಪುತ್ತೂರಮೂಲೆ

ಜೇನಿನ ರುಚಿಯನ್ನು ಸವಿಯದವರು ಈ ಲೋಕದೊಳಗೆ ಇರರು. ಅಂತೆಯೇ ಜೇನು ಪ್ರಪಂಚದ ಹಿರಿಯ, ಮಂಗಳೂರು ಅಜ್ಜ, ದಿವಂಗತ ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರನ್ನು ಬಲ್ಲದ ಮಧುಪ್ರೇಮಿಗಳಿಲ್ಲ ಎಂದರೆ ಅತಿಶಯೋಕ್ತಿಯಲ್ಲ. ವಯೋಧರ್ಮಕ್ಕನುಸಾರ ಅಜ್ಜ ಆದರೂ ಅವರೋರ್ವ ಮೋಡದೆಡೆಯ ಎಳೆಯ ದಿನಕರ.

ಪೈಲೂರು ಲಕ್ಷ್ಮೀನಾರಾಯಣ ರಾವ್ ಓರ್ವ ಅಪ್ಪಟ ಮಧುಪ್ರೇಮಿ. ಹಿಂದೆ ಒಂದು ಕಾಲವಿತ್ತು. ಜೇನುಕುಟುಂಬಗಳು ಗುಡ್ಡಗಾಡುಗಳಲ್ಲೇ ನೆಲೆಸಿದ್ದು, ಹಿಂಸಾ ಪದ್ಧತಿಯಿಂದ ಜೇನನ್ನು ಸಂಗ್ರಹಿಸುತ್ತಿದ್ದರು. ಇದರಿಂದಾಗಿ ಜೇನುಕುಟುಂಬಗಳಿಗೆ ತೊಂದರೆಯಾಗುತ್ತಿತ್ತು. ಬೆಂಕಿಯ ಪ್ರಯೋಗ ಮಾರಕವಾಗಿ ಪರಿಣಮಿಸುತ್ತಿತ್ತು. ಇದೇ ಸಮಯದಲ್ಲಿ ಅಜ್ಜ ಜೇನುಕುಟುಂಬಗಳೆಡೆಗೆ ಆಕರ್ಷಿತರಾದರು. 1936ರಲ್ಲಿ ಕೊಡಗು ಜಿಲ್ಲೆಯ ವಿರಾಜಪೇಟೆಯಲ್ಲಿ ಜೇನುಕೃಷಿ ಸಹಕಾರಿ ಸಂಘವು ಸ್ಥಾಪನೆಯಾಯಿತು. ತಟ್ಟನೆ ಕಾರ್ಯಪ್ರವೃತ್ತರಾದ ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರು ಕಂಜರ್ಪಣೆ ಗೋಪಾಲಕೃಷ್ಣಯ್ಯ, ಪೈಲೂರು ಶಿವರಾಮಯ್ಯ ಮುಂತಾದ ಮಹನೀಯರನ್ನು ಒಗ್ಗೂಡಿಸಿ, ಮೇ 21, 1938ರಂದು 'ಪುತ್ತೂರು ತಾಲೂಕು ಸಹಕಾರಿ ಜೇನುವ್ಯವಸಾಯ, ಜೇನುಸಂಗ್ರಹ ಮತ್ತು ಮಾರಾಟ ಸಂಘ'ವನ್ನು ಸುಳ್ಯದ ಚೊಕ್ಕಾಡಿಯಲ್ಲಿ ಸ್ಥಾಪಿಸಿದರು.

ಇದೇ ಸಂಘವು ಮುಂದೆ ಬೆಳೆಯುತ್ತಾ ಈಗಿನ ದ.ಕ. ಜೇನುವ್ಯವಸಾಯಗಾರರ ಸಹಕಾರಿ ಸಂಘವಾಗಿ ಮೂಡಿಬಂದು, ಪ್ರಸ್ತುತ ಸುಮಾರು 11 ವರ್ಷಗಳಿಂದ 'ಎ' ತರಗತಿಯಲ್ಲಿ ಮುಂದುವರಿಯುತ್ತಿದೆ. ಸಂಘ ಈ ಪ್ರಗತಿ ಸಾಧಿಸಿರುವುದು ಪೈಲೂರರಿಗೆ ಸಂದ ನಿಜ ಗೌರವ.

**ಜೇನುಸಾಕಣೆ ಪ್ರಚಾರ**

ಪೈಲೂರು ಅವರು ಜೇನುಸಂಘದ ಹುಟ್ಟಿಗೆ ಕಾರಣರಾದರೂ, ಆರಂಭದ ಹಂತದಲ್ಲಿ ಯಾವುದೇ ಹುದ್ದೆಯನ್ನು ವಹಿಸದೆ ಜೇನುಕೃಷಿ ಪ್ರಚಾರಾರ್ಥ ತರಬೇತಿ ಶಿಬಿರಗಳನ್ನು ನಡೆಸಿ, ಜನಸಾಮಾನ್ಯರು ಆಧುನಿಕ ಜೇನುಕೃಷಿಯಲ್ಲಿ ತೊಡಗುವಂತೆ ಪ್ರೇರೇಪಿಸಿದರು. 'ಜೇನಿನ ವ್ಯವಸಾಯ'ವೆಂಬ ಪುಸ್ತಕ ಬರೆದು ಹಂಚಿದರು. ಅವರು 1942-43ರ ಅವಧಿಯಲ್ಲಿ ಮಂಗಳೂರಿನಲ್ಲಿ ಅಖಿಲ ಭಾರತ ಜೇನುಕೃಷಿಕರ ಸಮ್ಮೇಳನವನ್ನು ಏರ್ಪಡಿಸಿದ್ದರು.

ಪೈಲೂರು ಅವರು 1946-54ರ ವರೆಗೆ ಜೇನುಸಂಘದ ಗೌರವ ಕಾರ್ಯದರ್ಶಿಗಳಾಗಿದ್ದರು. 1954-60ರ ವರೆಗೆ ಇದರ ಅಧ್ಯಕ್ಷರಾಗಿದ್ದರು. ಮಾತ್ರವಲ್ಲದೆ ಹಲವಾರು ವರ್ಷ ಸಂಘದ ನಿರ್ದೇಶಕರಾಗಿ ಸಕ್ರಿಯ ಸೇವೆ ಸಲ್ಲಿಸಿದ್ದು, ಸಂಘದ, ಜೇನುಸಾಕಣೆಯ ಆಗುಹೋಗುಗಳನ್ನು ನಿಕಟವಾಗಿ ಬಲ್ಲವರಾಗಿದ್ದರು. ಅಧಿಕಾರ, ಅಂತಸ್ತು, ಸಂಪತ್ತಿಗೆ ಆಸೆಪಡದೆ, ಅನೇಕ ವರ್ಷಗಳ ಕಾಲ ದಕ್ಷತೆಯಿಂದ ಸೇವೆ ಸಲ್ಲಿಸಿದ ಪೈಲೂರು ಅವರು ಜೇನುಕೃಷಿಕರ ನಡುವೆ ತುಂಬ ಜನಪ್ರಿಯರಾಗಿದ್ದರು. 1957ರಲ್ಲಿ 'ಮಧುವನ'ವೆಂಬ ಮಾಸಪತ್ರಿಕೆಯನ್ನು ಆರಂಭಿಸಿ, ಅದರ ಪ್ರಧಾನ ಸಂಪಾದಕರಾಗಿದ್ದು, ಶಾಸ್ತ್ರೀಯ ಜೇನುವ್ಯವಸಾಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಮನೆಮನೆಗೂ ತಲುಪಿಸಲು ಪ್ರಯತ್ನಿಸಿದ್ದರು. ಅವರೇ ಹೇಳಿದಂತೆ, ಜೇನುವ್ಯವಸಾಯವು 'ಸ್ಪರ್ಧೆ ಇಲ್ಲದ ವ್ಯವಸಾಯ' ಎಂದರೆ ಅತಿಶಯೋಕ್ತಿ ಆಗಲಾರದು. ಜೇನುಕೃಷಿಗೆ ಬೇಕಾದುದು ಮನಸ್ಸು ಮತ್ತು ಸಮರ್ಪಕ ಮಾಹಿತಿ. ಜೇನುಕೃಷಿಯನ್ನು ಬಡವ-ಬಲ್ಲಿದ, ವಿದ್ಯಾವಂತ-ಅವಿದ್ಯಾವಂತ, ಪುರುಷ-ಮಹಿಳೆ, ಮಕ್ಕಳು-ವಯೋವೃದ್ಧರು ಎಂಬ ಯಾವುದೇ ತಾರತಮ್ಯವಿಲ್ಲದೆ ಕೈಗೊಳ್ಳಬಹುದು. ಪೈಲೂರರು ಇದನ್ನು ಸ್ವತಃ ಮಾಡಿತೋರಿಸಿದರು.

ಪೈಲೂರು ಅವರು ಜೇನುಸಂಘದ ಹುಟ್ಟಿಗೆ ಕಾರಣರಾದರೂ, ಆರಂಭದ ಹಂತದಲ್ಲಿ ಯಾವುದೇ ಹುದ್ದೆಯನ್ನು ವಹಿಸದೆ ಜೇನುಕೃಷಿ ಪ್ರಚಾರಾರ್ಥ ತರಬೇತಿ ಶಿಬಿರಗಳನ್ನು ನಡೆಸಿ, ಜನಸಾಮಾನ್ಯರು ಆಧುನಿಕ ಜೇನುಕೃಷಿಯಲ್ಲಿ ತೊಡಗುವಂತೆ ಪ್ರೇರೇಪಿಸಿದರು. 'ಜೇನಿನವ್ಯವಸಾಯ'ವೆಂಬ ಪುಸ್ತಕ ಬರೆದು ಹಂಚಿದರು.

ಅವರು ತಮ್ಮ 84ನೇ ಇಳಿವಯಸ್ಸಿನಲ್ಲಿ ಕೂಡಾ ಜೇನುಸಾಕಣೆಗೆ ಪ್ರೇರಣೆ ನೀಡುತ್ತಿದ್ದುದು ಸ್ಮರಣೀಯ. ಜೇನುಸಾಕಣೆಯ ವಿವಿಧ ಪುಸ್ತಕಗಳು, ಫಿಲಂಗಳು ಅವರಲ್ಲಿ ಸದಾ ಲಭ್ಯ. ಮನೆಯಲ್ಲಿದ್ದುಕೊಂಡೇ ಜೇನುಸಂಘದ ಹಿತವನ್ನು ಹಾರೈಸುವುದು, ಬೆಳವಣಿಗೆಯನ್ನು ಗಮನಿಸುವುದು, ಒಳ್ಳೆಯ ಕೆಲಸವನ್ನು ಮಾಡಿದಾಗ ಬೆನ್ನುತಟ್ಟಿ ಪ್ರೋತ್ಸಾಹಿಸುವುದು ಅವರ ಜಾಯಮಾನ. ಜೇನುಕೃಷಿಯಲ್ಲಿನ ಅನುಭವಗಳನ್ನು ಅವರು ಆಗಾಗ 'ಮಧುಪ್ರಪಂಚ'ದಲ್ಲಿ ಹಂಚಿಕೊಳ್ಳುತ್ತಿದ್ದರು.

1976ನೇ ಇಸವಿಯಲ್ಲಿ ಕೋಟೆ ಲಕ್ಷ್ಮೀನಾರಾಯಣ ಅವರು ಸಂಘದ ಅಧ್ಯಕ್ಷರಾಗಿದ್ದರು. ಅವರು ನನ್ನನ್ನು ಪೈಲೂರರ ಮಂಗಳೂರು ಮನೆಗೆ ಸಂಘದ ಕೆಲಸದ ನಿಮಿತ್ತ ಕಳುಹಿಸಿದ್ದರು. ನನಗೆ ಪೈಲೂರರು ಹೊಸಬರು, ಹೇಳಿಕೇಳಿ ಮಾತ್ರ ಗೊತ್ತಿತ್ತು. ಆದರೂ ವಿಚಾರಿಸುತ್ತಾ ಪೈಲೂರರ ಮನೆಗೆ ಹೋದೆ. ನಾನು ಅದುವರೆಗೂ ಅವರನ್ನು ನೋಡಿಯೂ ಇರಲಿಲ್ಲ. ಹೋದವನೆ, ಪೈಲೂರು ಅವರು ಇದ್ದಾರೆಯೇ ಎಂದು ಕೇಳಿದೆ. ಏನೋ ಕೆಲಸದಲ್ಲಿ ತಲ್ಲೀನರಾಗಿದ್ದ ಅವರು ಕೂಡಲೇ ಬಂದು, 'ಹೌದು, ನಾನೇ ಪೈಲೂರು ಲಕ್ಷ್ಮೀನಾರಾಯಣ ರಾವ್, ಏನಾಗಬೇಕಿತ್ತು?' ಎಂದು ಕೇಳಿದರು. ನನ್ನ ಪರಿಚಯವನ್ನು ಹೇಳಿದೊಡನೆ ತಕ್ಷಣವೇ ಒಳಕರೆದು,

ಕೇವಲ 3-4 ನಿಮಿಷಗಳಲ್ಲಿ ಎಲ್ಲವನ್ನೂ ಕೇಳಿಸಿಕೊಂಡು ಸಮರ್ಪಕ ವಿಷಯವನ್ನು ತಿಳಿಸಿದರು. ಹಿಂದಿರುಗುವಾಗ ಸಿಹಿಯೊಂದಿಗೆ ಕಳುಹಿಸಿಕೊಟ್ಟರು.

ಜೇನುಸಂಘದ ತಿಂಗಳ ಆಡಳಿತ ಸಭೆಗೆ ಪೈಲೂರರು ಬರಲಾಗದಿದ್ದಲ್ಲಿ ಮುಂದಾಗಿಯೇ ತಿಳಿಸುತ್ತಿದ್ದರು. ಹಾಗೆಯೇ ಆಡಳಿತ ಸಭೆ, ಮಹಾಸಭೆಗೆ ಬರುವಾಗ ನಿಗದಿತ ತಾಸಿನ ಮೊದಲೇ ಬರುತ್ತಿದ್ದರು. ಸಮಗ್ರ ಮಾಹಿತಿಯನ್ನು ಕಲೆಹಾಕಿ ವಿಮರ್ಶಿಸುತ್ತಿದ್ದರು. ನೌಕರವರ್ಗವನ್ನು ಪ್ರೋತ್ಸಾಹಿಸುತ್ತಿದ್ದರು. ಕಾನೂನುಬದ್ಧ ಸವಲತ್ತುಗಳನ್ನು ನೀಡುವಲ್ಲಿ ಅವರದು ಎತ್ತಿದ ಕೈ. ಆಡಳಿತ ಮಂಡಳಿಯಲ್ಲಿ ಚರ್ಚಿಸುವ ವಿಷಯಗಳು ಬಂದಾಗ ಅವರ ತೀರ್ಮಾನಕ್ಕೆ ಮಹತ್ವವಿತ್ತು. ಉತ್ತಮ ಜೇನುಕೃಷಿಕರಿಗೆ ಶುಭ ಹಾರೈಸಿ ಪ್ರಶಂಸಿಸುತ್ತಿದ್ದರು. ತನ್ನ ಕೃತಿ 'ಜೇನು ವ್ಯವಸಾಯ'ದ ಮರುಮುದ್ರಣಕ್ಕೆ ಅವಕಾಶ ನೀಡಿದ್ದರು. ಯಾವುದೇ ಪ್ರತಿಫಲವನ್ನು ಅವರು ಅಪೇಕ್ಷಿಪಟ್ಟವರಲ್ಲ. ಜೇನುಕುಟುಂಬದಲ್ಲಿ ರಾಣಿ ಜೇನ್ನೊಣಕ್ಕೆ ಹಿರಿಸ್ಥಾನ. ಅಂತೆಯೇ ಜೇನುವ್ಯವಸಾಯದಲ್ಲಿ ಪೈಲೂರರಿಗೆ ಅಗ್ರಸ್ಥಾನ.

ವಿದೇಶಿ ಜೇನ್ನೊಣ ಎಪಿಸ್ ಮೆಲ್ಲಿಫೆರಾದ ಬಗ್ಗೆ ಇತ್ತೀಚಿನ ವರ್ಷಗಳಲ್ಲಿ ನಮ್ಮ ಜಿಲ್ಲೆಯ ಅಲ್ಲಲ್ಲಿ ಪ್ರಯೋಗಗಳನ್ನು ಕೈಗೊಳ್ಳಲಾಗಿತ್ತು. ಈ ಸಂದರ್ಭದಲ್ಲಿ ಪೈಲೂರರು ಸುಮ್ಮನೆ ಇರದೆ, ಅದರ ಸಾಧಕ-ಬಾಧಕಗಳ ಬಗ್ಗೆ ಓದಿ ವಿಮರ್ಶಿಸಿದ್ದರು. ತಾವೇ ಸ್ವತಃ ಮೆಲ್ಲಿಫೆರಾ ಸಾಕಿ ಆ ಕುರಿತು ಅನುಭವ ಪಡೆದರು. ತೊಡುವೆ ಜೇನಿಗೆ ಥ್ಯಾ ಸ್ಯಾಕ್‌ಬ್ರೂಡ್ ಕಾಯಿಲೆ ಬಂದಾಗ ಅದರ ನಿವಾರಣೆಗೆ ಪರಿಹಾರೋಪಾಯವನ್ನು ಅವರು ಚಿಂತಿಸಿದರು. ರಾಜ್ಯಮಟ್ಟದಲ್ಲಿ ಜೇನುಕೃಷಿಕರ ಸಮ್ಮೇಳನ ಏರ್ಪಡಿಸಿ ಜೇನುಕೃಷಿಯ ಮುನ್ನಡೆಯ ಬಗ್ಗೆ ವಿಮರ್ಶೆ ನಡೆಸಬೇಕೆಂದು ಅವರು ಬಹಳವಾಗಿ ಆಶಿಸಿದ್ದರು. ಅದರಂತೆ ಜೇನುಸಂಘವು ಇತ್ತೀಚೆಗೆ ಮಂಗಳೂರಿನಲ್ಲಿ ಮೂರು ದಿನಗಳ ಜೇನು ಉತ್ಸವ ಹಮ್ಮಿಕೊಂಡಿತ್ತು.

**ಪುಳಕಿತ ಭಾವನೆ**

18.5.2002ರಂದು ಜೇನುಸಂಘದ ಅಧ್ಯಕ್ಷ ಕೆ. ಭಾಸ್ಕರ ರೈ, ನಿರ್ದೇಶಕ ಬಿ.ಟಿ. ನಾರಾಯಣ ಭಟ್ ಹಾಗೂ ನಾನು ಪೈಲೂರರ ನಿವಾಸಕ್ಕೆ ತೆರಳಿದ್ದೆವು. 'ಪೈಲೂರರು ಅನಾರೋಗ್ಯದಿಂದಿದ್ದು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾರೆ' ಎಂದು ತಿಳಿದು, ಮಾತನಾಡಿಸಿಕೊಂಡು ಬರುವ ಅಪೇಕ್ಷೆ ನಮ್ಮದಾಗಿತ್ತು. ನಾವು ಹೋದಾಗ ಅವರು ಹಾಸಿಗೆಯಲ್ಲಿ ಮಲಗಿಕೊಂಡು ವಿಶ್ರಾಂತಿ ಪಡೆಯುತ್ತಿದ್ದರು. ಕಣ್ಣು ಸರಿ ಕಾಣಿಸುತ್ತಿರಲಿಲ್ಲ. ಅವರನ್ನು ಸಮೀಪಿಸಿ ಮಾತನಾಡುತ್ತಿದ್ದಂತೆ, ನಮ್ಮನ್ನು ಗುರುತು ಹಿಡಿದು ಚಕ್ಕನೆ ಎದ್ದು ಕುಳಿತು, ಸಂಘದ ಸಕಲ ವಿಚಾರಗಳನ್ನು ಕೇಳಿ ತಿಳಿದರು.

ನಾವು ಹೇಳಬೇಕಾದ್ದನ್ನೆಲ್ಲಾ ಚುಟುಕಿನಲ್ಲಿ ವಿವರಿಸಿ ಹೇಳಿದಾಗ ಪೈಲೂರರ ಮುಗ್ಧ ಮುಖದಲ್ಲಿ ಕಂಡ ಪುಳಕಿತ ಭಾವನೆ ನಿಜಕ್ಕೂ ಸ್ಮರಣೀಯ. ಈ ಸಂದರ್ಭದಲ್ಲಿ ಸಂಘದ ಅಧ್ಯಕ್ಷರಾದ ಕೆ. ಭಾಸ್ಕರ ರೈ ಅವರು ಪೈಲೂರರಿಗೆ ಶಾಲು ಹೊದಿಸಿ, ಶ್ರೀಗಂಧದ ಹಾರ ಹಾಕಿ ಸನ್ಮಾನಿಸಿದರು. ನಾವು ಧನ್ಯತೆಯಿಂದ ಬಾಗಿದೆವು.





**ವೈ. ಮಹಾಬಲ ಭಟ್, ಪುತ್ತೂರಮೂಲೆ**
ವ್ಯವಸ್ಥಾಪಕ ನಿರ್ದೇಶಕ
ದ.ಕ. ಜೇನುವ್ಯವಸಾಯಗಾರರ ಸಹಕಾರಿ ಸಂಘ
ಪುತ್ತೂರು - 573 201
ದಕ್ಷಿಣ ಕನ್ನಡ



# ವಿಶಾಲ ಮನಸ್ಸಿನ ರಾಯರು

• ಡಾ. ಕೆ.ಎಸ್. ಪ್ರಭಾಕರ ರಾವ್

ಪೈಲೂರು ಲಕ್ಷ್ಮೀನಾರಾಯಣ ರಾಯರ ಪರಿಚಯ ನನಗೆ ಆದದ್ದು 1963ರಲ್ಲಿ. ಆಗ ನಾನು ಮಂಗಳೂರಿನ ಜಿಲ್ಲಾ ಜಾನುವಾರು ಆಸ್ಪತ್ರೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದೆ. ಆ ಸಂದರ್ಭದಲ್ಲಿ ಒಂದು ದಿನ ಪೈಲೂರರು ನಮ್ಮ ಆಸ್ಪತ್ರೆಗೆ ಬಂದು ನನ್ನನ್ನು ಮನೆಗೆ ಬರಬೇಕೆಂದು ವಿನಂತಿಸಿದರು. ನಾನು ಸಾಯಂಕಾಲ ಸುಮಾರು 6 ಗಂಟೆಗೆ ಆಫೀಸು ಮುಗಿಸಿ ಅವರಲ್ಲಿಗೆ ಹೋದೆ. ಪೈಲೂರರು ಆಗ ತಾನೇ ಆಫೀಸಿನಿಂದ ಬಂದಿದ್ದರು. ನನ್ನನ್ನು ಕಂಡು ಸ್ವಾಗತಿಸಿ, 'ಪರಮೇಶ್ವರೀ, ಡಾಕ್ಟ್ರು ಬಂದಿದ್ದಾರೆ, ನೋಡು. ಮೊದಲು ಕಾಫಿ ಕೊಡು' ಎಂದರು. ನಾನು ಅವರ ಜಾನುವಾರು ಹಟ್ಟಿಗೆ ಹೋದೆ. ಅಲ್ಲಿ ಕೆಲಸ ಮುಗಿಸಿ ಬರುವಾಗ ಕಾಫಿ ರೆಡಿ ಆಗಿತ್ತು. ಅವರಲ್ಲಿ ಆಗ 4-5 ಜಾನುವಾರುಗಳು ಇದ್ದವು. ಪರಮೇಶ್ವರಿ ಅಮ್ಮನವರಿಗೆ ಜಾನುವಾರುಗಳ ಮೇಲೆ ತುಂಬಾ ಮಮತೆ.

ಕಾಫಿ ಕುಡಿದು ಹೊರಗೆ ಬಂದಾಗ ಪೈಲೂರರು ಅವರ ಹೂದೋಟದಲ್ಲಿ ಕೆಲವು ಗಿಡಗಳನ್ನು ನೆಡುತ್ತಿದ್ದರು. ಸಣ್ಣ ಹುಡುಗರ ಚುರುಕುತನ ಅವರಲ್ಲಿ ಕಂಡೆ. ನನ್ನನ್ನು ನೋಡಿ, 'ನಿಮಗೆ ಹೂದೋಟವೆಂದರೆ ಇಷ್ಟ ಇದೆಯೋ, ನಿಮ್ಮಲ್ಲಿ ಹೂದೋಟ ಇದೆಯೋ' ಎಂದು ಕೇಳಿದರು. 'ನನಗೂ ಗಾರ್ಡನಿಂಗ್ ಹವ್ಯಾಸ ಇದೆ' ಎಂದೆ. ಅವರು ತುಂಬಾ ಖುಶಿಪಟ್ಟು, 'ನಿಮ್ಮಲ್ಲಿ ಇಲ್ಲದ ಯಾವುದಾದರೂ ಗಿಡ ನನ್ನಲ್ಲಿ ಇದ್ದರೆ ತಕ್ಕೊಂಡು ಹೋಗಿ' ಎಂದರು. ಎಷ್ಟೊಂದು ವಿಶಾಲ ಮನಸ್ಸು ರಾಯರದ್ದು ಎಂದು ಕಂಡಿತು ನನಗೆ.

ತೋಟದಿಂದ ಒಳಗೆ ಬಂದೊಡನೆ ಅವರು ಮೀನಿನ ಮನೆ(Aquarium)ಗೆ ಸ್ವಲ್ಪ ಅನ್ನ ಉಂಡೆಮಾಡಿ

ಹಾಕಿದರು. 'ನಿಮ್ಮಲ್ಲಿ ಅಕ್ವೇರಿಯಂ ಉಂಟೋ? ಇದ್ದರೆ ನನ್ನಲ್ಲಿ ಇರುವ ಕೆಲವು ಮೀನು ತಕ್ಕೊಂಡು ಹೋಗಿರಿ. ಇದು ಒಳ್ಳೆಯ ಹವ್ಯಾಸ' ಎಂದರು. ಆಮೇಲೆ ಬೇರೆ ಬೇರೆ ಮೀನುಗಳ ಪರಿಚಯ, ನೀರಿನಲ್ಲಿ ಬೆಳೆಯುವ ಗಿಡಗಳು ಇತ್ಯಾದಿ ತುಂಬಾ ವಿಷಯ ನನಗೆ ತಿಳಿಸಿದರು. ಅವರೇ ಬರೆದ ಮೀನುಸಾಕಣೆ ಪುಸ್ತಕದ ಪ್ರತಿ ನನಗೆ ಕೊಟ್ಟರು. ನಾನು ನಮಸ್ಕರಿಸಿ ಹೊರಟುಬಂದೆ. ಬರುವಾಗ ಮನಸ್ಸಿನಲ್ಲಿ ಪೈಲೂರರ ಬಗ್ಗೆ ತುಂಬಾ ಅಭಿಮಾನ ಉಂಟಾಯಿತು. ಸರಳತೆಯ ಮನುಷ್ಯ, ವಿಶಾಲ ಮನೋಭಾವ ... ಇಂಥವರು ಸಮಾಜದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಇದ್ದರೆ ನಮ್ಮ ಸಮಾಜ ಸುಧಾರಿಸಬಹುದು ಎಂಬ ಭಾವನೆ ಬಂತು. ಸರಳ, ಸಮಭಾವದ, ವಿಶಾಲ ಮನಸ್ಸಿನ, ಪರೋಪಕಾರಿ ಮನುಷ್ಯ ಎಂದೆನಿಸಿತು.

**ಪುಸ್ತಕ - ಮಾಹಿತಿ**

ಇನ್ನೊಮ್ಮೆ ಪೈಲೂರರ ಜೊತೆ ತುಂಬಾ ಸಮಯ ಕಳೆಯಬೇಕೆನ್ನಿಸಿತು. ಆದಿತ್ಯವಾರ ಮಧ್ಯಾಹ್ನ ಮೂರು ಗಂಟೆಗೆ ಅವರು ಮನೆಯಲ್ಲಿದ್ದಾರೆಂದು ತಿಳಿದು ಮನೆಗೆ ಹೋದೆ.



ಮೀನ್ಸಾಕಣೆ ಹವ್ಯಾಸಕ್ಕೆ ಉತ್ತೇಜನ.

ರಾಯರು ತೋಟದಲ್ಲಿದ್ದರು. ನಗುಮುಖದಿಂದ ಸ್ವಾಗತಿಸಿ, ಕೈ ತೊಳೆದು ಒಳಕೋಣೆಗೆ ಬಂದರು. 'ನಿಮಗೆ ಹೂದೋಟ ಎಂದರೆ ಬಹಳ ಪ್ರೀತಿ ಅಲ್ಲವೋ, ಇಲ್ಲಿ ನೋಡಿ' ಎಂದು ಕ್ಯಾಕ್ಟಸ್ ಮತ್ತು ಆರ್ಕಿಡ್‌ನ ಪುಸ್ತಕ ನೋಡಲು ಕೊಟ್ಟರು. ಅವುಗಳ ವಿಷಯ ತುಂಬಾ ವಿವರಿಸಿದರು. ರಾಯರು ಅವರ ಮಿತ್ರರೊಡನೆ ಬೇರೆ ಬೇರೆ ಜಾಗಗಳಿಗೆ ಹೋಗಿ, ಕ್ಯಾಕ್ಟಸ್ ಮತ್ತು ಆರ್ಕಿಡ್ ಸಂಗ್ರಹಿಸಿದ್ದರು. ಅವುಗಳನ್ನು ಬೆಳೆಸುವುದು ಹೇಗೆ ಎಂದು ನನಗೆ ಮಾಹಿತಿ ಕೊಟ್ಟರು. ಅವರ ತೋಟದಲ್ಲೂ ಕೆಲವು ಗಿಡಗಳಿದ್ದವು. ನೋಡಿ ತುಂಬಾ ಸಂತೋಷಪಟ್ಟು ನಾನು ಹೊರಟುಬಂದೆ.



ಪೈಲೂರರ ಗಾಂಧಿ ಅಂಚೆಚೀಟಿ ಸಂಗ್ರಹ.

ನಂತರ ನಾನು ಅವರನ್ನು ಆಗಾಗ ಭೇಟಿ ಆಗುತ್ತಿದ್ದೆ. ಅಂಥಾ ಒಂದು ಸಂದರ್ಭದಲ್ಲಿ ನನಗೆ ಜೇನುಗೂಡು, ಜೇನುಸಾಕಣೆ ಬಗ್ಗೆ ತಿಳಿಸಿದರು. ಬೇರೆ ಬೇರೆ ಕಾಡುಗಳಿಗೆ ಹೋಗಿ ಜೇನುಕುಟುಂಬಗಳನ್ನು ತಂದು, ಅವನ್ನು ತೋಟದಲ್ಲಿಟ್ಟು, ಪೆಟ್ಟಿಗೆಯಲ್ಲಿ ಸಾಕಿ ಜೇನು ತೆಗೆದ ವಿಷಯ ನನಗೆ ತಿಳಿಸಿದರು.

ಇನ್ನೊಂದು ಸಲ ನಾನು ಹೋದಾಗ ಅಂಚೆಚೀಟಿ ವಿಷಯ ಬಂತು. ಆಗ ನಾನು ಅಂಚೆ ಇಲಾಖೆಯ ಸಹಕಾರದಿಂದ ಮಂಗಳೂರು ಫಿಲಾಟೆಲಿಕ್ ಕ್ಲಬ್ ಸ್ಥಾಪಿಸಿದ್ದೆ. ಅದರ ಸ್ಥಾಪಕ ಅಧ್ಯಕ್ಷನೂ ಆಗಿದ್ದೆ. ಪೈಲೂರರನ್ನು ಒಬ್ಬ ಸದಸ್ಯರನ್ನಾಗಿ ಮಾಡಿ, ಆ ವಾರದ ಸಭೆಗೆ ಕರೆತಂದು ಎಲ್ಲರಿಗೂ ಪರಿಚಯಿಸಿದೆ. ಅವರಲ್ಲಿದ್ದ ಅಂಚೆಚೀಟಿ ಸಂಗ್ರಹವನ್ನು ಹೇಗೆ ಕ್ರಮವಾಗಿ ಜೋಡಿಸಬಹುದು ಎಂದು ತಿಳಿದುಕೊಂಡದ್ದಲ್ಲದೆ ಅವರ ಸಂಗ್ರಹವನ್ನು ಎಲ್ಲಾ ಸದಸ್ಯರಿಗೂ ತೋರಿಸಿದರು. ಹಲವರ ಪರಿಚಯ ಮಾಡಿಕೊಂಡರು. ಅವರ 'ಮಹಾತ್ಮಾ ಗಾಂಧಿ' ಅಂಚೆಚೀಟಿ ಸಂಗ್ರಹಕ್ಕೆ ಅನೇಕ ಮನ್ನಣೆಗಳು ಸಿಕ್ಕಿದವು.

ಹಲವು ಕಡೆ ಅಂಚೆಚೀಟಿ ಪ್ರದರ್ಶನಕ್ಕೆ ಅವರು ಹೋಗಿದ್ದರು.

### ಅಭಿಮಾನ

ಪೈಲೂರರಿಂದ ನಾನು ಅನೇಕ ವಿಷಯಗಳನ್ನು ಕಲಿತು ನನ್ನ ಜೀವನದಲ್ಲಿ ಅಳವಡಿಸಿಕೊಂಡಿದ್ದೇನೆ. ಅವರ ಕರ್ತವ್ಯ ನಿಷ್ಠೆ, ಸಮಯ ಪರಿಪಾಲನೆ ಹಾಗೂ ನಿಸ್ವಾರ್ಥ ಸೇವೆಯನ್ನು ತುಂಬಾ ಮೆಚ್ಚಿದ್ದೇನೆ. ಇಂಥಾ ಒಬ್ಬ ಮನುಷ್ಯ ನಮ್ಮೊಂದಿಗೆ ಇದ್ದರು ಎಂಬ ಅಭಿಮಾನ ನನಗಿದೆ. ನಾನು ಅವರಿಗೆ ತುಂಬಾ ಋಣಿ.

ಪೈಲೂರರಿಂದ ನಾನು ಅನೇಕ ವಿಷಯಗಳನ್ನು ಕಲಿತು ನನ್ನ ಜೀವನದಲ್ಲಿ ಅಳವಡಿಸಿಕೊಂಡಿದ್ದೇನೆ ಅವರ ಕರ್ತವ್ಯ ನಿಷ್ಠೆ, ಸಮಯ ಪರಿಪಾಲನೆ ಹಾಗೂ ನಿಸ್ವಾರ್ಥ ಸೇವೆಯನ್ನು ತುಂಬಾ ಮೆಚ್ಚಿದ್ದೇನೆ ಇಂಥಾ ಒಬ್ಬ ಮನುಷ್ಯ ನಮ್ಮೊಂದಿಗೆ ಇದ್ದರು ಎಂಬ ಅಭಿಮಾನ ನನಗಿದೆ.

ನಾನು ಪ್ರತಿದಿನ ದಕ್ಷಿಣಾ ಮೂರ್ತಿ ಸ್ತೋತ್ರ ಪಠಿಸುತ್ತೇನೆ. ಧ್ಯಾನ ಶ್ಲೋಕದಲ್ಲಿ ಬರುತ್ತದೆ -

ಓಂ ನಮಃ ಪ್ರಣವಾರ್ಥಾಯ ಶುದ್ಧ ಜ್ಞಾನೈಕ ಮೂರ್ತಯೇ,
ನಿರ್ಮಲಾಯ ಪ್ರಶಾಂತಾಯ ದಕ್ಷಿಣಾ ಮೂರ್ತಯೇ ನಮಃ

ಈ ಸ್ತೋತ್ರ ಹೇಳುವಾಗ ನನಗೆ ಪೈಲೂರರ ನೆನಪು ಬರುತ್ತದೆ. ಪೈಲೂರರಿಗೂ ಅವರ ಹವ್ಯಾಸಗಳಲ್ಲಿದ್ದ ಜ್ಞಾನ - ಶುದ್ಧ ಜ್ಞಾನ (pure knowledge). ಅವರ ಮನಸ್ಸು, ಭಾವನೆ ನಿರ್ಮಲ. ಅವರಷ್ಟು ಪ್ರಶಾಂತ ಪ್ರಕೃತಿ ಇದ್ದ ಇನ್ನೊಬ್ಬನನ್ನು ನಾನು ಕಾಣಲಿಲ್ಲ. ಅವರಿಗೆ ದೇವರಲ್ಲಿ ಅನನ್ಯ ಭಕ್ತಿ. ಹಾಗಾಗಿ ಅವರು ನಿತ್ಯ ಪ್ರಶಾಂತರಾಗಿಯೇ ಕಾಣುತ್ತಿದ್ದರು.





**ಡಾ. ಕೆ.ಎಸ್. ಪ್ರಭಾಕರ ರಾವ್**
ಬ್ರಿಜ್ ವ್ಯೂ, ಬಿಜೈ
ಮಂಗಳೂರು - 575 004





ಮಾಮರ ನೆರಳಲ್ಲಿ...

# ಪೈಲೂರು ಲಕ್ಷ್ಮೀನಾರಾಯಣ ರಾಯರು

▪ ಮುಕುಂದ ಪ್ರಭು ಮಂಜೇಶ್ವರ

ಇಸವಿ 1943 - 44 ಇರಬೇಕು. ನಾನು ಕೆನರಾ ಹೈಸ್ಕೂಲಿನಲ್ಲಿ ಹತ್ತನೇ ತರಗತಿಯಲ್ಲಿ ವಿದ್ಯಾರ್ಥಿ. ಒಂದು ದಿನ ಸೂಟು ಬೂಟು ಧರಿಸಿದ, ಎಣ್ಣೆಕಪ್ಪು ವರ್ಣವಾದರೂ ಲಕ್ಷಣವಾಗಿರುವ, ಹೆಚ್ಚು ಕಡಿಮೆ ನನ್ನಷ್ಟೇ ವಯಸ್ಸಿನ ವಿದ್ಯಾರ್ಥಿ ನನ್ನ ಮನೆಗೆ ಬಂದ. ತನ್ನ ಪರಿಚಯ ಹೇಳಿಕೊಂಡು, ನನ್ನ ಅಂಚೆಚೀಟಿಗಳ ಸಂಗ್ರಹವನ್ನು ನೋಡಲು ಬಯಸಿದ. ನೋಡುತ್ತ ನೋಡುತ್ತ ನಾನು ಸಂಗ್ರಹ ಮಾಡಲು ಬಳಸಿದ ವಿಧಾನಗಳನ್ನು ಕೇಳಿ ತಿಳಿದುಕೊಂಡ. ಹೊರಡುವಾಗ, ನಾನೂ ಅವನ ಜೊತೆಗೆ ಅವನ ಬಿಡಾರಕ್ಕೆ ಬಂದು ಅವನ ಸಂಗ್ರಹವನ್ನು ನೋಡಬೇಕೆಂದು ಹೇಳಿ, ನನ್ನನ್ನೂ ಜೊತೆಯಲ್ಲಿ ಕರೆದುಕೊಂಡು ಹೋದ.

ಪಿಂಟೋಸ್ ಲೇನ್‌ನ ದಕ್ಷಿಣದ ತುದಿಯಲ್ಲಿ, ಓಣಿಯ ಪೂರ್ವದಲ್ಲಿ ವಿಶಾಲವಾದ ಕಾಂಪೌಂಡು. ಅದರಲ್ಲಿ ಮೂರು ನಾಲ್ಕು ಮನೆಗಳಿದ್ದುವೆಂದು ನನ್ನ ನೆನಪು. ಕಾಂಪೌಂಡು ಪ್ರವೇಶಿಸಿದೊಡನೆ, ಎಡಬದಿಯಲ್ಲಿ ಪೋರ್ಟಿಕೋ ಇರುವ, ದಳಿಯೋ, ಡೈಮಂಡ್ ತಟ್ಟಿಯೋ (ಸರಿಯಾಗಿ ನೆನಪಿಲ್ಲ) ಇರುವ ಮನೆ. ಮನೆಯ ಪ್ರವೇಶದ ಮೆಟ್ಟಿಲುಗಳ ಎಡಭಾಗದಲ್ಲಿ ಸುಮಾರು ಎರಡೂವರೆ ಅಡಿ ವ್ಯಾಸದ ಮೂರು ಸುಟ್ಟ ಆವೆಮಣ್ಣಿನ ಬೋಗುಣಿಗಳು (Tubs). ಇವುಗಳು ನಾಲ್ಕು ಇಂಚು ವ್ಯಾಸದ ಅಂತಹವೇ ಕೊಳವೆಗಳ ಮೂಲಕ ಪರಸ್ಪರ ಜೋಡಣೆ ಹೊಂದಿದ್ದುವು. ಇವುಗಳಲ್ಲಿ ನೀರು, ತಾವರೆ ಗಿಡಗಳು, ಗಿಡಗಳ ನಡುವೆ ಕೆಂಪು ಬಣ್ಣದ ನಾಲ್ಕಾರು ಮೀನುಗಳು, ಸುಮಾರು ನಾಲ್ಕರಿಂದ ಆರು ಇಂಚು ಉದ್ದವು. ಒಂದು ಬೋಗುಣಿಯಿಂದ ಕೊಳವೆ ಮೂಲಕ ಇನ್ನೊಂದು ಬೋಗುಣಿಗೆ ಅತ್ತಿತ್ತ ಓಡಾಡುತ್ತಾ ಇದ್ದುವು. ಅವುಗಳನ್ನು ನೋಡುತ್ತಾ ನಿಂತಿದ್ದ ನನ್ನನ್ನು ಉದ್ದೇಶಿಸಿ, 'ಅವು ಗೋಲ್ಡ್ ಫಿಶ್' (ಚಿನ್ನದ ಮೀನು) ಎಂದು ಯುವಕ ಹೇಳಿದ. 'ಚಿನ್ನದ ಮೀನಾದರೆ ಕೆಂಪು ಬಣ್ಣ ಏಕೆ?' ಎಂದು ಕೇಳಿದೆ. 'ಅವರನ್ನು ಕೇಳು' ಎಂದು ನನ್ನನ್ನು ಪೋರ್ಟಿಕೋದಲ್ಲಿ ಕೂರಲು ಹೇಳಿ ಒಳಗೆ ಹೋದ. ಸ್ವಲ್ಪವೇ ಸಮಯದಲ್ಲಿ ತೋಳು ಇರುವ ಒಳ ಅಂಗಿ (ಬನಿಯನ್), ಸೈಕಲ್ ಕಚ್ಚೆ ಹಾಕಿರುವ ವೇಸ್ಟಿ ಉಟ್ಟ, ನಗುಮುಖದ ಗಂಡಸು ಮನೆಯೊಳಗಿನಿಂದ ಹೊರಕ್ಕೆ ಬಂದರು. 'ಇಂತಹ ಜಾತಿಯ ಮೀನುಗಳಲ್ಲಿ ಚಿನ್ನದ ಬಣ್ಣದವೂ ಇವೆ, ಅವುಗಳ ಹೆಸರೇ ಈ ಜಾತಿಯ ಇತರ ಮೀನುಗಳಿಗೂ ಬಣ್ಣ ಬೇರೆ ಇದ್ದರೂ

ಅನ್ವಯವಾಗುತ್ತದೆ' ಎಂದು ಹೇಳಿದವರು ನನ್ನ ಪರಿಚಯ ವಿಚಾರಿಸಿಕೊಂಡರು. ಅಷ್ಟು ಹೊತ್ತಿಗೆ ನನ್ನನ್ನು ಕರೆದುಕೊಂಡ ಬಂದ ಯುವಕ ಜಿ.ಎಮ್. ಮೋಹನ್, ಕೈತುಂಬ stock books ಹಿಡಿದುಕೊಂಡು ಬಂದು, 'ಇವರೇ ಪೈಲೂರು ಲಕ್ಷ್ಮೀನಾರಾಯಣ ರಾಯರು' ಎಂದು ನನಗೆ ತಿಳಿಸಿದ. ರಾಯರು ಆಗ ತಾನೇ ಕಚೇರಿಯಿಂದ ಬಂದಿದ್ದರೆಂದು ಕಾಣುತ್ತದೆ - ಮನೆಯೊಳಗೆ ಹೋದರು. ನಾನು ಮೋಹನದಾಸರ ಅಂಚೆಚೀಟಿ ಸಂಗ್ರಹವನ್ನು ನೋಡಿ ನನ್ನ ಮನೆಗೆ ಮರಳಿದೆ.

### ಔದಾರ್ಯ - ಪ್ರೋತ್ಸಾಹ

ಇದು ಪೈಲೂರರ ಜೊತೆ ನನ್ನ ಮೊದಲ ಭೇಟಿಯ ವಿವರ. ಆ ಕಾಲಕ್ಕೆ ಅವರು ಅಂಚೆಚೀಟಿ ಸಂಗ್ರಹ ಮಾಡುತ್ತಿರಲಿಲ್ಲ ಎಂದು ನೆನಪು. ನಾನು ಶಾಲೆ ಕಾಲೇಜು ಮುಗಿಸಿ ಸಾಬೂನು ತಯಾರಿಸುವ ಕಾರ್ಖಾನೆಯಲ್ಲಿ ರಸಾಯನತಜ್ಞ (Chemist) ಆಗಿ ಕೆಲಸಕ್ಕೆ ಸೇರಿದ್ದೆ. ಈ ಕಾರ್ಖಾನೆಗೂ ಪೈಲೂರರು ಆಗೊಮ್ಮೆ ಈಗೊಮ್ಮೆ ಸಾಬೂನು ಖರೀದಿಸಲು ಬರುತ್ತಿದ್ದರು. 'ಈಗಲೂ ಅಂಚೆಚೀಟಿ ಸಂಗ್ರಹ ಮಾಡುತ್ತಾ ಇದ್ದೀರಾ?' ಎಂದು ನನ್ನನ್ನು ಕೇಳಿದರು. ಹುಡುಗಾಟಿಕೆಯಲ್ಲಿ ಸಂಗ್ರಹ ಮಾಡಲು ಆರಂಭಿಸಿ, ಉದ್ಯೋಗಕ್ಕೆ ಸೇರಿಕೊಂಡ ಮೇಲೆ ಹವ್ಯಾಸವನ್ನು ನಿಲ್ಲಿಸುವವರು ಬಹಳ ಜನ ಎಂದು ರಾಯರಿಗೆ ಗೊತ್ತಿತ್ತು. 'ಈಗಲೂ ಸಂಗ್ರಹ ಮಾಡುತ್ತಿದ್ದೇನೆ, ಚೆನ್ನಾಗಿ ಮುಂದುವರಿಯುತ್ತಾ ಇದೆ' ಎಂದು ಹೇಳಿದೆ. 'ನಿಮಗೆ ಇನ್ನೊಬ್ಬ ಸಂಗ್ರಹ ಮಾಡುವವರನ್ನು ಪರಿಚಯಿಸುತ್ತೇನೆ, ಅವರಲ್ಲಿ ಅಂಚೆಚೀಟಿಗಳ ಬಗ್ಗೆ ಒಳ್ಳೆಯ ಪುಸ್ತಕಗಳಿವೆ' ಎಂದು ಹೇಳಿದ ರಾಯರು, ಕೆಲವು ದಿನಗಳ ಮೇಲೆ ಕಲ್ಬಾರ್ ವೆಂಕಟ್ರಮಣ, ದೊಡ್ಡ ತೋಟ - ಇವರನ್ನು ಕರಕೊಂಡು ಬಂದು ನನ್ನನ್ನು ಅವರಿಗೆ ಪರಿಚಯ ಮಾಡಿಕೊಟ್ಟರು. ಕಲ್ಬಾರರು ನನ್ನ ಸಂಗ್ರಹದ ಬಗ್ಗೆ ವಿವರಗಳನ್ನು ಕೇಳಿ ತಿಳಿದುಕೊಂಡರು. ಆಮೇಲೆ ಪುಸ್ತಕಗಳನ್ನು ಒಂದೊಂದರಂತೆ ನನಗೆ ಓದಲು ಕಳುಹಿಸಿಕೊಟ್ಟರು ಸುಳ್ಯದ SVPS ಲಾರಿ ಮೂಲಕ. ಆ ಕಾಲಕ್ಕೇ ಅವು ಅಲಭ್ಯವಾಗಿದ್ದ, ಜಾಲ್‌ಕೂಪರ್ ಬರೆದ, ಭಾರತೀಯ ಅಂಚೆಚೀಟಿಗಳ ಬಗ್ಗೆ ಬಹಳಷ್ಟು ವಿವರಗಳಿರುವ ಪುಸ್ತಕಗಳಾಗಿದ್ದವು. ಅವನ್ನು ಓದಿ, ನನ್ನ ತಿಳಿವನ್ನು ಹೆಚ್ಚಿಸಿಕೊಂಡೆ. ಅದೇ ಲಾರಿಯ ಮೂಲಕ ಕಲ್ಬಾರರಿಗೆ ಅವುಗಳನ್ನು ಮರಳಿಸಿದೆ. ಆ ಕಾಲದಲ್ಲೂ ಪೈಲೂರರು ಸ್ವತಃ ಅಂಚೆಚೀಟಿಗಳನ್ನು ಸಂಗ್ರಹಿಸುತ್ತಿರಲಿಲ್ಲ - ಆದರೆ ನನಗೆ ಪ್ರಯೋಜನ ಸಿಗಲಿ ಎಂದು ಔದಾರ್ಯದಿಂದ, ಕಲ್ಬಾರರನ್ನು ಪರಿಚಯಿಸಿ, ಅವರ ಪುಸ್ತಕಗಳ ಮೂಲಕ ನನ್ನ ತಿಳಿವನ್ನು ಹೆಚ್ಚಿಸಿದವರು ಪೈಲೂರರು.

> ಪ್ರತಿಯೊಂದು ಕೆಲಸದಲ್ಲೂ ಶಿಸ್ತು, ಅಚ್ಚುಕಟ್ಟು; ಜೀವನದಲ್ಲಿ ಕೂಡ. ನಮ್ಮೆಲ್ಲರಿಂದ ಬೇರೆಯಾಗಿ ನಿಲ್ಲುವ ವಿಶೇಷ ಗುಣ ಪೈಲೂರರಲ್ಲಿತ್ತು. ಅವರು ಯಾರ ಬಗೆಗೂ ಕೆಟ್ಟ ಮಾತನ್ನು ಆಡುವವರೇ ಅಲ್ಲ - ತಮಗೆ ದ್ರೋಹ ಬಗೆದವರ ಬಗೆಗೂ ಕೂಡ. ತಮ್ಮ ಸಮ್ಮುಖದಲ್ಲಿ ಇತರರಿಗೂ ಕೆಟ್ಟ ಮಾತನ್ನು ಆಡಲು ಬಿಡುತ್ತಿರಲಿಲ್ಲ.

1972ರಲ್ಲಿ ಮಂಗಳೂರಿನಲ್ಲಿ ಮೊದಲಬಾರಿಗೆ ಅಂಚೆಚೀಟಿ ಪ್ರದರ್ಶನ ನಡೆದು, ಮಂಗಳೂರು ಅಂಚೆಚೀಟಿ ಸಂಗ್ರಾಹಕರ ಸಂಘದ ಸ್ಥಾಪನೆ ಆಯಿತು. ಆ ವೇಳೆಗೆ ಪೈಲೂರರು ಮಹಾತ್ಮಾ ಗಾಂಧಿ ಅಂಚೆಚೀಟಿಗಳನ್ನು ಸಂಗ್ರಹಿಸುತ್ತಿದ್ದುದು ಮಾತ್ರವಲ್ಲ, ಒಂದು ಉತ್ತಮ ಸಂಗ್ರಹವನ್ನು, ಪ್ರದರ್ಶನಕ್ಕೆ ಯೋಗ್ಯವಾದಂತಹ ಸಂಗ್ರಹವನ್ನು ಮಾಡಿ ಪ್ರದರ್ಶಿಸಿ, ಮುಂದೆ ಹಲವು ಬಹುಮಾನಗಳನ್ನು ಪಡೆದುಕೊಂಡರು. ಯುವಕರಾಗಿದ್ದ ನಮ್ಮನ್ನೂ ಮೀರಿಸಿ ಪ್ರದರ್ಶನದ ತಯಾರಿ - ಫ್ರೇಮುಗಳನ್ನು ನಿಲ್ಲಿಸಿ, ಅವುಗಳೊಳಗೆ ಬೇರೆ ಬೇರೆ ಸಂಗ್ರಾಹಕರು ಕಳುಹಿಸಿದ ಸಂಗ್ರಹ ಪ್ರದರ್ಶಿಕೆಗಳನ್ನು ಜೋಡಿಸುವಲ್ಲಿ ಅವರು ಮಾಡುತ್ತಿದ್ದ ಕೆಲಸ ನಮ್ಮನ್ನು ಆಶ್ಚರ್ಯಚಕಿತರನ್ನಾಗಿ ಮಾಡುತ್ತಿತ್ತು. ಪ್ರದರ್ಶನದ ಹಿಂದಿನ ನಡುರಾತ್ರಿ ಸುಮಾರು ಎರಡು ಗಂಟೆಗಳ ವರೆಗೂ ನಮ್ಮೊಂದಿಗೆ ಇದ್ದು, ವಾಹನವಿಲ್ಲದ ಕೆಲವು ಸ್ವಯಂಸೇವಕರನ್ನು ತಮ್ಮ ಗಾಡಿಯಲ್ಲಿ ಮನೆಗೆ ಮುಟ್ಟಿಸುತ್ತಿದ್ದರು.




ಮೀನುಗಳಿಗೆ ಆಹಾರ ತಯಾರಿ

ಸ್ವಲ್ಪ ಸಮಯ ಮೀನುಗಳ ತೊಟ್ಟಿಯನ್ನು ಇಟ್ಟುಕೊಂಡಿದ್ದೆ. ಆಗ ಪುನಃ ರಾಯರನ್ನು ಆಗಾಗ ಕಾಣಲು ಹೋಗುತ್ತಿದ್ದೆ. ಆಗ ಅವರು ಮೀನುಗಳಿಗೆ ಆಹಾರವನ್ನು ತಯಾರಿಸುವ ವಿಧಾನವನ್ನು ನನಗೆ ಹೇಳಿಕೊಟ್ಟರು. ಕೋಳಿ ಮೊಟ್ಟೆಗಳನ್ನು ಒಡೆದು, ಅದರ ಲೋಳೆಯನ್ನು ಚೆನ್ನಾಗಿ ಕಲಸಿ, ಬಿಳಿ ಎನೇಮಲ್ ಬೋಗುಣಿಯ ಬದಿಗೆಲ್ಲ ಹತ್ತಿಕೊಳ್ಳುವಂತೆ ಅದನ್ನು ಆಚೀಚೆ ವಾಲಿಸಿ, ಬಿಸಿಲಲ್ಲಿಟ್ಟು ಒಣಗಿಸಿ, ಪುನಃ ಕೆಳಕ್ಕೆ ಹರಿದುಬಂದ ಲೋಳೆಯನ್ನು ಬದಿಗೆ ಹತ್ತಿಕೊಳ್ಳುವಂತೆ ಮಾಡಿ, ಒಣಗಿಸಿ, ಅದನ್ನು ಕೆರೆದು ತೆಗೆದು ಚಿಕ್ಕ ಬಾಟಲಿಗಳಲ್ಲಿ ಶೇಖರಿಸಿ ಇಡುವ ವಿಧಾನವನ್ನು ಕಲಿಸಿಕೊಟ್ಟರು. ಅವರಲ್ಲಿದ್ದ ಚಿಕ್ಕ ಚಿಕ್ಕ ಗಪ್ಪಿ, ಪ್ಲಾಟಿ, ಗೌರಾಮಿ, ಬೆಟ್ಟಾದಂತಹ ಮೀನುಗಳನ್ನು ಆಸಕ್ತಿಯಿಂದ ಮಕ್ಕಳಿಗೆ ಉಚಿತವಾಗಿ ಕೊಡುತ್ತಿದ್ದುದನ್ನು ನಾನು ಕಂಡಿದ್ದೇನೆ.

ಹಾರ್ವೆಯವರು ನಮಗಿಬ್ಬರಿಗೂ ಸ್ನೇಹಿತರು. ಅವರ ಮರದಕಣಿ ನರ್ಸರಿಗೆ ಹೋಗಿದ್ದಾಗ ಅಲ್ಲಿಗೆ ಪೈಲೂರರೂ ಬಂದಿದ್ದರು. ಹಾರ್ವೆಯವರ ತೋಟದಲ್ಲಿ ಬ್ರಹ್ಮಕಮಲದ ಒಂದು ಎಲೆ ಕೆಳಗೆ ನೆಲದಲ್ಲಿ ಬಿದ್ದಿತ್ತು. ಅದನ್ನು ಎತ್ತಿಕೊಂಡ ಪೈಲೂರರು ಅದನ್ನು ನನ್ನ ಕೈಯಲ್ಲಿಟ್ಟು, 'ಒಂದು ಚಟ್ಟಿಯಲ್ಲಿ ಹಾಕಿಬಿಡು, ಗಿಡ ಚೆನ್ನಾಗಿ ಬರುತ್ತದೆ' ಎಂದು ಹೇಳಿದರು. ಆ ಒಂದು ಎಲೆಯಿಂದ ಪ್ರಾರಂಭವಾದ ಬ್ರಹ್ಮಕಮಲದ ಸಂತಾನ, ಈಗ ನನ್ನ ಮನೆಯಿಂದ ಹತ್ತಿಪ್ಪತ್ತು ಮನೆಗಳಿಗೆ ಮುಟ್ಟಿದೆ. ಅದೇ ದಿನ ಇನ್ನೊಂದು ದೊಡ್ಡ ಎಲೆ Monsteraವನ್ನೂ ಕೊಟ್ಟಿದ್ದರು. 'ಯಾವುದಾದರೊಂದು ದೊಡ್ಡ ಮರದ ಬುಡದಲ್ಲಿ ನೆಡು, ಬಳ್ಳಿಯಾಗಿ ಮೇಲೆ ಏರುತ್ತದೆ' ಎಂದರು. ಮನೆ ಅಂಗಳದಲ್ಲಿರುವ ಮಾವಿನ ಮರದ ಬುಡದಲ್ಲಿ ನೆಟ್ಟೆ. ಆ ಒಂದು ಎಲೆ ಬಳ್ಳಿಯಾಗಿ, ಮರದ ಮೇಲೆಲ್ಲಾ ಹಬ್ಬಿ, ಮರವನ್ನೇ ನುಂಗಿಬಿಡುವಷ್ಟಾಯಿತು. ತನ್ನ ಹೆಸರು Monstera ಕೊನೆಯ ಅಕ್ಷರವನ್ನು ಕಳೆದುಕೊಂಡು Monster ಆಯಿತು!

ಪೈಲೂರರದ್ದು ಶಿಸ್ತಿನ ಜೀವನ. ಪ್ರತಿಯೊಂದು ಕೆಲಸದಲ್ಲೂ ಶಿಸ್ತು, ಅಚ್ಚುಕಟ್ಟು; ಜೀವನದಲ್ಲಿ ಕೂಡ. ನಮ್ಮೆಲ್ಲರಿಂದ ಬೇರೆಯಾಗಿ ನಿಲ್ಲುವ ವಿಶೇಷಗುಣ ಪೈಲೂರರಲ್ಲಿತ್ತು. ಅವರು ಯಾರ ಬಗೆಗೂ ಕೆಟ್ಟ ಮಾತನ್ನು ಆಡುವವರೇ ಅಲ್ಲ - ತಮಗೆ ದ್ರೋಹ ಬಗೆದವರ ಬಗೆಗೂ ಕೂಡ. ತಮ್ಮ ಸಮ್ಮುಖದಲ್ಲಿ ಇತರರಿಗೂ ಕೆಟ್ಟ ಮಾತನ್ನು ಆಡಲು ಬಿಡುತ್ತಿರಲಿಲ್ಲ. ಒಂದು 'ಪ್ರದರ್ಶನ'ದಲ್ಲಿ ನಮ್ಮ ಸಂಘದ ಮೂವರು ಸದಸ್ಯರು ಪ್ರದರ್ಶನಕ್ಕಿಟ್ಟ ಅಂಚೆಚೀಟಿ ಸಂಗ್ರಹದಲ್ಲಿ ಪ್ರತಿಯೊಬ್ಬರ ಪ್ರದರ್ಶಿಕೆಯಿಂದ ಮೂರು ಮೂರು ಹಾಳೆಗಳು ಕದ್ದುಹೋದವು. ನನ್ನ ಮೂರು ಹಾಳೆಗಳಲ್ಲಿ ಬೆಲೆಬಾಳುವ ಅಂಚೆಚೀಟಿಗಳು ಇದ್ದುದರಿಂದ, ಅದರ ಉಸ್ತುವಾರಿ ವಹಿಸಿಕೊಂಡವರ ಬಗ್ಗೆ ಏನೋ ಕೆಟ್ಟ ಮಾತು ನನ್ನ ಬಾಯಿಯಿಂದ ಸಹಜವಾಗಿ ಹೊರಡುತ್ತಿದ್ದಂತೆಯೇ, 'ಹೋಗಲಿ ಬಿಡಿ, ಇದನ್ನೆಲ್ಲ ಹಚ್ಚಿಕೊಳ್ಳಬೇಡಿ' ಎಂದು ನನ್ನ ಬಾಯಿಮುಚ್ಚಿಸಿದವರು ಪೈಲೂರರು - ಅವರ ಪ್ರದರ್ಶಿಕೆಯಿಂದಲೂ ಮೂರು ಹಾಳೆಗಳು ಕದ್ದುಹೋಗಿದ್ದರೂ ಕೂಡ!





**ಎಂ. ಮುಕುಂದ ಪ್ರಭು**
729-1
ಬಿಜೈ ನ್ಯೂ ರೋಡ್
ಮಂಗಳೂರು - 575 004





ಸಿದ್ದಕಟ್ಟೆಯಲ್ಲಿ ಜೇನು ಕಾಯಕ.

# ರಾಯರ ನೆನಪು

ರಮೇಶ್‌ಚಂದ್ರ, ಹಾರ್ವೆ

ನಾನು ಬೈಂದೂರಿನಿಂದ ಮಂಗಳೂರಿಗೆ ಬಂದು ನೆಲೆಸಿದ್ದು 1947ರಲ್ಲಿ. ನನಗಾಗ 16 ವರ್ಷ. ಜೇನುಸಾಕಣೆ ಆಗಿನ್ನೂ ಹೊಸ ಸಂಗತಿ. ನನಗೆ ಆ ಕುರಿತು ಆಸಕ್ತಿಯಿತ್ತು. ಈ ಹಿನ್ನೆಲೆಯಲ್ಲಿ ರಾಯರ ಸಂಪರ್ಕ ಬಂದೊದಗಿತು. ಅವರು ಆಗ ಪಿಂಟೋಸ್ ಲೇನ್‌ನಲ್ಲಿದ್ದರು. ಆಗಲೇ ಅವರು ಜೇನುವ್ಯವಸಾಯದಲ್ಲಿ ಸಾಕಷ್ಟು ಪರಿಣತಿ ಹೊಂದಿದ್ದರು. ಈ ನಿಟ್ಟಿನಲ್ಲಿ ಅನೇಕ ಹೊಸ ಪ್ರಯೋಗಗಳನ್ನೂ ಮಾಡುತ್ತಿದ್ದರು. ಆ ದಿನಗಳಲ್ಲೇ ರಾಯರು ನೈನಿತಾಲ್‌ನಿಂದ ಹಿಮಾಲಯನ್ ಜೇನುಕುಟುಂಬ ತರಿಸಿದ್ದರು ಅಂದರೆ ಅವರ ಪ್ರಯೋಗಶೀಲತೆ ಊಹಿಸಿ!

ರಾಯರು ಆಧುನಿಕ ಜೇನುವ್ಯವಸಾಯದ ಬಗ್ಗೆ ವಿದೇಶಗಳಿಂದ ಪುಸ್ತಕ ಹಾಗೂ ಪತ್ರಿಕೆಗಳನ್ನು ತರಿಸುತ್ತಿದ್ದರು. ಈ ಪೈಕಿ 'ಗ್ಲೀನಿಂಗ್ಸ್ ಇನ್ ಬೀ ಕಲ್ಚರ್' ಮ್ಯಾಗಝಿನ್ ಕೂಡ ಒಂದು. ನಾನದನ್ನು ತಪ್ಪದೆ ಓದುತ್ತಿದ್ದೆ. ಆಗ ಅವರ ಬಳಿ ನಾಲ್ಕೈದು ತೊಡುವೆ ಜೇನುಕುಟುಂಬಗಳಿದ್ದವು.

1949ರಲ್ಲಿ ರಾಯರು ಕಾರ್ಯನಿರ್ವಹಿಸುತ್ತಿದ್ದ ಸೊಸೈಟಿಯಲ್ಲಿ ತಾತ್ಕಾಲಿಕ ಕೆಲಸದಲ್ಲಿದ್ದೆ. ಯಾದಾಸ್ತು ಬರೆಯುವ ಕೆಲಸ. ನನ್ನ ಕೆಲಸವನ್ನು ಬಹುತೇಕ ರಾಯರೇ ಮಾಡುತ್ತಿದ್ದರು. ಇಬ್ಬರಿಗೂ ಜೇನಿನ ಹುಚ್ಚು; ಅದೇ ಗುಂಗು. ಮಂಜೇಶ್ವರದಲ್ಲಿ ಒಂದೇ ದಿನ ನಾಲ್ಕು ಜೇನುಕುಟುಂಬಗಳನ್ನು ಹಿಡಿದು ಪೆಟ್ಟಿಗೆಗಳಿಗೆ ತುಂಬಿಕೊಟ್ಟದ್ದು ನೆನಪಾಗುತ್ತದೆ. ಜೇನಿನ ಜಾಡು ಹಿಡಿದು ನಾವು ಸುತ್ತಾಡಿದ್ದಕ್ಕೆ ಲೆಕ್ಕವಿಲ್ಲ. ತೀರ ಇತ್ತೀಚೆಗೆ - ಏಳೆಂಟು ವರ್ಷಗಳ ಹಿಂದೆ - ಬಂಟ್ವಾಳದ ಸಿದ್ದಕಟ್ಟೆಗೆ ಹೋಗಿದ್ದೆವು. ಅಲ್ಲಿ ಮಿತ್ರ ಮಾಣಿಕ್ಯ ಪಡಿವಾಳ್ ಅವರ ತೋಟದಲ್ಲಿದ್ದ ಮಡಿಕೆಗಳಲ್ಲಿ ಜೇನುಕುಟುಂಬಗಳು ಬಂದು ನೆಲೆಸಿದ್ದವು. ಪಡಿವಾಳ್ ಅವರ ಕಾರಿನಲ್ಲಿ ನಾವು (ಜೊತೆಯಲ್ಲಿ ಶಿವರಾಂ ಕೂಡ) ಅಲ್ಲಿಗೆ ತೆರಳಿ, ಜೇನುಕುಟುಂಬಗಳನ್ನು ಗೂಡಿಗೆ ವರ್ಗಾಯಿಸಿದ್ದು ಇನ್ನೂ ನನ್ನ ನೆನಪಿನಲ್ಲಿ ಹಸಿರಾಗಿಯೇ ಇದೆ. ಅಷ್ಟೇಕೆ, ಈಗ ಎರಡು ವರ್ಷಗಳ ಹಿಂದೆ ಪಂಪ್‌ವೆಲ್‌ನಿಂದಾಚೆ ಕಪಿತಾನಿಯೋ ಶಾಲೆಯ ಸಮೀಪ ಡಾ. ಎಂ.ಜಿ. ಭಟ್ ಅವರ ಮನೆಯ ಬಳಿ ಜೇನುಕುಟುಂಬ ಹಿಡಿಯಲು

ರಾಯರು ಹೋಗಿದ್ದರು. ಕುಟುಂಬ ಮರದಲ್ಲಿದ್ದುದರಿಂದ ಅದನ್ನು ಹಿಡಿದು ಗೂಡಿಗೆ ವರ್ಗಾಯಿಸುವುದು ಅವರಿಗೆ ಸಾಧ್ಯವಾಗಲಿಲ್ಲ.

**ಪ್ರೇರಣೆ - ಒತ್ತಾಯ**

ನನ್ನಲ್ಲಿ ಅಕ್ವೇರಿಯಂ ಹವ್ಯಾಸಕ್ಕೂ ರಾಯರೇ ಪ್ರೇರಣೆ. ಅವರು 1948ರ ಸುಮಾರಿಗೆ ಮುಂಬೈಯಿಂದ ಬಣ್ಣದ ಮೀನುಗಳನ್ನು ತಂದಿದ್ದರು. ಅವರ ಒತ್ತಾಯದ ಮೇರೆಗೆ 1953ರಲ್ಲಿ ನಾನು ಅಕ್ವೇರಿಯಂ ಹವ್ಯಾಸವನ್ನು ಒಂದು ವೃತ್ತಿಯನ್ನಾಗಿಸಿದೆ. ಅದು ನಿರಂತರ ಮುಂದುವರಿಯಿತು. ಈಗಲೂ ಇದೆ. ರಾಯರು ನನ್ನ ವೃತ್ತಿಯ ಬೆಳವಣಿಗೆಗೆ ಹಲವು ರೀತಿಯಲ್ಲಿ ಪ್ರೋತ್ಸಾಹ ನೀಡುತ್ತಿದ್ದರು. ಒಮ್ಮೆ ಅವರು ಸಿಂಗಾಪುರದಿಂದ ಅಲಂಕಾರಿಕ ಮೀನುಗಳನ್ನು ತರಿಸಿಕೊಟ್ಟಿದ್ದರು - ತಮ್ಮದೇ ಖರ್ಚಿನಲ್ಲಿ! ಈ ಹವ್ಯಾಸಕ್ಕೆ ಸಂಬಂಧಿಸಿದ ಪುಸ್ತಕಗಳು, ನಿಯತಕಾಲಿಕಗಳೂ ಅವರಲ್ಲಿದ್ದವು. ರಾಯರು ಒಂದೆರಡು ಸಲ ಶ್ರೀಲಂಕಾದಿಂದಲೂ ಮೀನು ಆಮದು ಮಾಡಿದ್ದರು.

ರಾಯರ ಹವ್ಯಾಸಗಳೆಲ್ಲ ಒಂದೊಂದಾಗಿ ನನಗೂ ಅಂಟತೊಡಗಿದವು. ಅವರೇ ನನಗೆ ಲವ್ ಬರ್ಡ್ಸ್ ಕೊಟ್ಟು, ಈ ಹವ್ಯಾಸಕ್ಕೆ ಚಾಲನೆ ನೀಡಿದರು (1958ರಲ್ಲಿ). ಮುಂದೊಂದು ದಿನ ನನ್ನಲ್ಲಿ ಸುಮಾರು ಐದುನೂರು ಲವ್ ಬರ್ಡ್ಸ್ ಇದ್ದವು. ಕೊನೆಕೊನೆಗೆ ಆ ಹವ್ಯಾಸ ನಷ್ಟದ ಹಾದಿಯಲ್ಲಿ ಸಾಗತೊಡಗಿದ್ದರಿಂದ ಹಕ್ಕಿಗಳ ಸಹವಾಸದಿಂದ ದೂರ ಉಳಿದೆ. ರಾಯರು ನನಗೆ ಆರ್ಕಿಡ್ ಪ್ರಪಂಚವನ್ನೂ ಪರಿಚಯಿಸಿದರು. ಅವರೊಂದಿಗೆ ಆರ್ಕಿಡ್ ಸಂಗ್ರಹಕ್ಕಾಗಿ ಒಮ್ಮೆ ಸಕಲೇಶಪುರಕ್ಕೂ ಹೋಗಿದ್ದೆ. (ಆಗ ಅವರು ಮೊದಲ ಬಾರಿಗೆ ಕಾರು ಕೊಂಡುಕೊಂಡಿದ್ದರು. ರಾಮ ಆಗಿನ್ನೂ ಸಣ್ಣವ. 'ಇನ್ನೂ ಜೋರು ಬಿಡಿ ಅಪ್ಪಯ್ಯ' ಅನ್ನುತ್ತಿದ್ದ. ರಾಯರು ಎದುರಿಗೆ ಸಿಕ್ಕಿದ ಎಲ್ಲ ವಾಹನಗಳನ್ನು ಓವರ್‌ಟೇಕ್ ಮಾಡುತ್ತಿದ್ದರು!) ರಾಯರು ನನ್ನನ್ನು ಸುಳ್ಯ ತಾಲೂಕಿನ ಬಂಟಮಲೆಗೂ ಕರೆದೊಯ್ದಿದ್ದರು.

ಹೂದೋಟ ಹವ್ಯಾಸವನ್ನು ಜನಪ್ರಿಯಗೊಳಿಸಲು ರಾಯರು ಸಾಕಷ್ಟು ಶ್ರಮಿಸಿದ್ದರು. ತೋಟಗಾರಿಕಾ ಸಂಘದ ಸ್ಥಾಪಕ ಸದಸ್ಯರಾಗಿದ್ದ ಅವರು ಸಂಘದ ಖಜಾಂಜಿ ಹಾಗೂ ಕಾರ್ಯದರ್ಶಿಯಾಗಿಯೂ ಕಾರ್ಯನಿರ್ವಹಿಸಿದ್ದರು. ಮಡಿಕೇರಿಯಲ್ಲಿ ಏರ್ಪಟ್ಟ ಪುಷ್ಪ ಪ್ರದರ್ಶನಕ್ಕೆ ತೀರ್ಪುಗಾರರಾಗಿ ನಾವಿಬ್ಬರೂ ಹೋಗಿದ್ದೆವು. ರಾಯರ ಕಾರಿನಲ್ಲಿಯೇ ಪಯಣ.

ಮಂಗಳೂರಿನ ಮಣ್ಣಗುಡ್ಡೆಯಲ್ಲಿ ಸತ್ಯಸಾಯಿ ಮಂದಿರ ಸ್ಥಾಪನೆಯಾದಂದಿನಿಂದಲೂ ಪ್ರತಿ ಗುರುವಾರ ರಾಯರು ಅಲ್ಲಿಗೆ ಬರುತ್ತಿದ್ದರು. ಮಂದಿರದಿಂದ ನಮ್ಮ ಮನೆ ಸಮೀಪ. ಹೀಗಾಗಿ ಅವರು ಪ್ರತಿ ಗುರುವಾರ ಸಂಜೆ ನಮ್ಮಲ್ಲಿಗೂ ಭೇಟಿನೀಡುತ್ತಿದ್ದರು. ಒಂದಿಷ್ಟು ಮಾತನಾಡಿ, ಮೀನು-ಹೂಗಿಡಗಳತ್ತ ಕಣ್ಣು ಹಾಯಿಸಿ ಮಂದಿರಕ್ಕೆ ತೆರಳುತ್ತಿದ್ದರು.





**ರಮೇಶ್‌ಚಂದ್ರ ಹಾರ್ವೆ**
**ಹಾರ್ವೆ ಅಕ್ವೇರಿಯಂ ಮತ್ತು ನರ್ಸರಿ**
**ಗುಂಡೂರಾವ್ ರಸ್ತೆ, ಮಣ್ಣಗುಡ್ಡ-ಗುರ್ಜಿ**
**ಮಂಗಳೂರು - 575 003**





# ಹವ್ಯಾಸಗಳ ಗುರು : ನನ್ನ ಚಿಕ್ಕಯ್ಯ

ಜಿ.ಕೆ. ಪೈಲೂರು

ಪೈಲೂರು ಲಕ್ಷ್ಮೀನಾರಾಯಣ ರಾಯರು ನನಗೆ ಚಿಕ್ಕಯ್ಯ(ಚಿಕ್ಕಪ್ಪ). ವೃತ್ತಿಯಲ್ಲಿ ನನಗೂ ಅವರಿಗೂ ಬಹಳ ವ್ಯತ್ಯಾಸವಿದ್ದರೂ ಹವ್ಯಾಸಗಳಲ್ಲಿ ನನಗೆ ಅವರು ಗುರುವಾಗಿದ್ದರು. ಬಣ್ಣದ ಮೀನುಗಳ ಸಾಕಣೆ, ಬಣ್ಣದ ಹಕ್ಕಿಗಳ ಸಾಕಣೆ ಮತ್ತು ಜೇನುಸಾಕಣೆಯಲ್ಲಿ ಅವರಿಂದ ನಾನು ಸ್ಫೂರ್ತಿ ಮತ್ತು ಮಾರ್ಗದರ್ಶನ ಪಡೆದು ಕೆಲವು ಸಾಧನೆಗಳನ್ನು ಮಾಡಲು ಸಾಧ್ಯವಾಯ್ತು.

1969-70ರಲ್ಲಿ ಬೆಂಗಳೂರಿನಲ್ಲಿ ಕೆಲವು ಸ್ನೇಹಿತರನ್ನು ಸೇರಿಸಿಕೊಂಡು ಲಕ್ಷ್ಮೀನಾರಾಯಣ ರಾಯರ ಮಾರ್ಗದರ್ಶನದಲ್ಲಿ ಬಣ್ಣದ ಮೀನುಗಳನ್ನು ಹವ್ಯಾಸಕ್ಕಾಗಿ ಸಾಕುವವರ ಸಂಘ ಸ್ಥಾಪಿಸಿದೆ; ನೋಂದಣಿಯನ್ನೂ ಮಾಡಿಸಿದೆ. ಅದರ ಸ್ಥಾಪಕ ಕಾರ್ಯದರ್ಶಿಯಾಗಿ ಕೆಲವು ವರ್ಷ ಕೆಲಸ ಮಾಡಿದೆ. ಆ ದಿನಗಳಲ್ಲಿ ಬಣ್ಣದ ಮೀನುಗಳ ಒಂದು ಪ್ರದರ್ಶನವನ್ನೂ ಏರ್ಪಡಿಸಿದ್ದೆವು. ಆಗಿನ ರಾಜ್ಯಪಾಲ ಶ್ರೀ ಧರ್ಮವೀರ ಅವರು ಪ್ರದರ್ಶನ ಉದ್ಘಾಟಿಸಿದ್ದರು. ಅನಿವಾರ್ಯ ಕಾರಣಗಳಿಂದ ಕೆಲವು ವರ್ಷಗಳ ನಂತರ ನಾನು ಆ ಸಂಘದಿಂದ ಹೊರಬರಬೇಕಾಯ್ತು.

ಚಿಕ್ಕಯ್ಯ ಪ್ರತಿದಿನ ಮಧ್ಯಾಹ್ನ ಅವರ ಊಟದ ಮೊದಲೇ ಕೈಯಲ್ಲಿ ನುಣ್ಣಗೆ ಅರೆದ ಅನ್ನದ ಉಂಡೆಯನ್ನು ಹಿಡಿದುಕೊಂಡು ಎಲ್ಲಾ ಮೀನಿನ ತೊಟ್ಟಿಗಳಿಗೆ ಹಾಕುತ್ತಿದ್ದುದನ್ನು ನಾನಿನ್ನೂ ಮರೆತಿಲ್ಲ. ಇದು ಐವತ್ತು ವರ್ಷಗಳ ಹಿಂದಿನ ದೃಶ್ಯ. ಇತ್ತೀಚಿನವರೆಗೂ (ಅಂದರೆ ಅವರ ಆರೋಗ್ಯ ಹದಗೆಡುವ ಮೊದಲು) ಮಂಗಳೂರಿಗೆ ಹೋದಾಗಲೆಲ್ಲಾ ಅದೇ ದೃಶ್ಯವನ್ನು ಮತ್ತೆ ಮತ್ತೆ ಕಾಣುತ್ತಿದ್ದೆ.

ಸುಮಾರು ಐದು ದಶಕಗಳ ಹಿಂದೆ ಮಂಗಳೂರಿಗೆ ಬಂದಿದ್ದ ಒಂದು ಸರ್ಕಸ್ಸಿನಲ್ಲಿ ಮೀನುಗಳನ್ನು (ಗೋಲ್ಡ್ ಫಿಶ್) ನೀರು ಸಹಿತ ನುಂಗಿ ಮತ್ತೆ ಅವುಗಳನ್ನು ನೀರು ಸಹಿತ ಜೀವಂತ ಹೊರಕ್ಕೆ ತೆಗೆಯುವ ಒಂದು ಕಾರ್ಯಕ್ರಮವಿತ್ತು. ಮೀನು ನುಂಗುವ ಆ ಸಿಂಗ್‌ಗೆ ಲಕ್ಷ್ಮೀನಾರಾಯಣ ರಾಯರೇ ಮೀನುಗಳನ್ನು



ಒದಗಿಸುತ್ತಿದ್ದುದು ನನಗಿನ್ನೂ ನೆನಪಿದೆ.

ಬೆಂಗಳೂರಿನಲ್ಲಿ ರಾಯರ ಮಾರ್ಗದರ್ಶನದಿಂದ ಬಣ್ಣದ ಹಕ್ಕಿಗಳನ್ನು (ಲವ್ ಬರ್ಡ್ಸ್) ಸಾಕಿ ಅಕ್ಕಪಕ್ಕದ ಮಕ್ಕಳಿಂದ 'ಗಿಳಿ ಮಾವ' ಎಂಬ ಹೆಸರನ್ನೂ ಪಡೆದೆ.

**ಸ್ಫೂರ್ತಿ - ಮಾರ್ಗದರ್ಶನ**

ಜೇನು ಸಾಕಣೆಯಲ್ಲಿ ನನ್ನ ತಂದೆ ಪೈಲೂರು ನಾರಾಯಣ ಅವರ ನಿಧನದ ನಂತರ ಲಕ್ಷ್ಮೀನಾರಾಯಣ ರಾಯರು ನನಗೆ ಸ್ಫೂರ್ತಿ ಮತ್ತು ಮಾರ್ಗದರ್ಶನ ನೀಡುತ್ತಿದ್ದರು. ಸುಮಾರು 53 ವರ್ಷಗಳ ಹಿಂದೆ ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ಲಕ್ಷ್ಮೀನಾರಾಯಣ ರಾಯರ ಪ್ರಯತ್ನದಿಂದಾಗಿ ಅಖಿಲ ಭಾರತ ಜೇನುಸಾಕಣೆದಾರರ ಅಧಿವೇಶನ ಮತ್ತು ವಸ್ತುಪ್ರದರ್ಶನ ಏರ್ಪಾಡಾಗಿತ್ತು. ಆಗ ನಾನು ಕಾಲೇಜಿಗೆ ರಜಾ ಹಾಕಿ ಸ್ವಯಂಸೇವಕನಾಗಿ ಅಧಿವೇಶನದಲ್ಲಿ ಕೆಲಸ ಮಾಡಿದ್ದನ್ನು ಇನ್ನೂ ಮರೆತಿಲ್ಲ.



ವೃತ್ತಿಯಲ್ಲಿ ನನಗೂ ಅವರಿಗೂ ಬಹಳ ವ್ಯತ್ಯಾಸ ವಿದ್ದರೂ ಹವ್ಯಾಸಗಳಲ್ಲಿ ನನಗೆ ಅವರು ಗುರುವಾಗಿದ್ದರು. ಬಣ್ಣದ ಮೀನುಗಳ ಸಾಕಣೆ, ಬಣ್ಣದ ಹಕ್ಕಿಗಳ ಸಾಕಣೆ ಮತ್ತು ಜೇನುಸಾಕಣೆಯಲ್ಲಿ ಅವರಿಂದ ನಾನು ಸ್ಫೂರ್ತಿ ಮತ್ತು ಮಾರ್ಗದರ್ಶನ ಪಡೆದೆ.

ಇತ್ತೀಚೆಗೆ, ಐದು ವರ್ಷಗಳ ಮೊದಲು ಜೇನುಪೆಟ್ಟಿಗೆಗಳ ಗುಣಮಟ್ಟದ ಅಗತ್ಯ ಮತ್ತು ಅದನ್ನು ಕಾಪಾಡುವ ಬಗ್ಗೆ ಸಂಬಂಧಪಟ್ಟ ಸರಕಾರಿ ಇಲಾಖೆಯವರಿಗೆ ಮನದಟ್ಟು ಮಾಡಲು ಪ್ರಯತ್ನಿಸಿದೆ. ಆ ಸಂದರ್ಭದಲ್ಲಿ ಹಲವು ಬಾರಿ ನಾನು ರಾಯರ ಸಲಹೆ ಮತ್ತು ಮಾರ್ಗದರ್ಶನ ಪಡೆದಿದ್ದೆ. ಸರಕಾರಿ ಇಲಾಖೆ ನನ್ನ ಸಲಹೆಗಳತ್ತ ಆಸಕ್ತಿ ತೋರಿಲ್ಲವೆಂಬುದು ಬೇರೆ ಮಾತು.

ಮೀನುಸಾಕಣೆ ಮತ್ತು ಜೇನುಸಾಕಣೆ ಹವ್ಯಾಸಗಳನ್ನು ಜನಪ್ರಿಯಗೊಳಿಸುವ ಉದ್ದೇಶದಿಂದ ಅವರು ಬರೆದ ಪುಸ್ತಕಗಳ ಪ್ರತಿಗಳನ್ನು ನಾನು ಕೇಳಿದಾಗಲೆಲ್ಲಾ ಉಚಿತವಾಗಿ ಕೊಡುತ್ತಿದ್ದರು. ಇದು ಅವರಿಗೆ ನನ್ನಲ್ಲಿದ್ದ ಪ್ರೀತಿ ಮತ್ತು ವಿಶ್ವಾಸಕ್ಕೆ ಒಂದು ದೃಷ್ಟಾಂತ.





**ಜಿ.ಕೆ. ಪೈಲೂರು**
1889, 6ನೇ ಅಡ್ಡ ರಸ್ತೆ
10ನೇ ಮುಖ್ಯರಸ್ತೆ, ಹೆಬ್ಬಾಳು 2ನೇ ಹಂತ
ಮೈಸೂರು - 570 017





# ಮೊದಲ ಭೇಟಿಯಲ್ಲೇ ಮೋಡಿ!

ಎಂ.ಆರ್. ಪಾವಂಜೆ

ನನ್ನ ಮತ್ತು ಪೈಲೂರು ಲಕ್ಷ್ಮೀನಾರಾಯಣ ರಾಯರ ಪರಿಚಯ ಸುಮಾರು ಮೂವತ್ತು ವರ್ಷಗಳಷ್ಟು ಹಳೆಯದು. ನನಗೆ ಅವರ ಪರಿಚಯವಾದದ್ದು ಮಂಗಳೂರಿನ ಅಡಿಕೆ ಸೊಸೈಟಿಯಲ್ಲಿ ಅವರು ಕಾರ್ಯದರ್ಶಿಯಾಗಿದ್ದ ಸಮಯದಲ್ಲಿ. ಮೊದಲ ಭೇಟಿಯಲ್ಲೇ ಅವರು ನನ್ನ ಮೇಲೆ ಮೋಡಿಮಾಡಿದ್ದರು. ಅವರ ನೇರ ನಡೆ, ನುಡಿ, ಆತ್ಮೀಯತೆ, ಚುರುಕುತನ, ಅವರ ನಗೆಮಾತುಗಳು ನನ್ನನ್ನು ಅವರ ಆತ್ಮೀಯ ಮಿತ್ರರಲ್ಲಿ ಒಬ್ಬನನ್ನಾಗಿ ಮಾಡಿತು. ಈ ಸ್ನೇಹಕ್ಕೆ ವಯಸ್ಸು ಎಂದೂ ಅಡ್ಡಿ ಬರಲಿಲ್ಲ.

ರಾಯರು ಒಂದು ಅಮೂಲ್ಯ ಅಂಚೆಚೀಟಿ ಇದ್ದಂತೆ. ಕೆಲವೊಂದು ಅಂಚೆಚೀಟಿಗಳು ಬಹಳ ಅಪರೂಪ ಮತ್ತು ಬೆಲೆಬಾಳುವಂಥವು. ನಮ್ಮ ರಾಯರ ವ್ಯಕ್ತಿತ್ವವೂ ಹಾಗೇ ಇತ್ತು. ನನ್ನ ಮತ್ತು ಅವರ ಪರಿಚಯದ ಮೊದಲೇ ಅವರಿಗೆ ಅಂಚೆಚೀಟಿ ಸಂಗ್ರಹದ ಹವ್ಯಾಸವಿತ್ತು. ಇದಕ್ಕೆ ಸರಿಯಾಗಿ ಜೂನ್ 1, 1975ರಲ್ಲಿ ಡಾ. ಪ್ರಭಾಕರ ರಾಯರ ಅಧ್ಯಕ್ಷತೆಯಲ್ಲಿ 'ಮಂಗಳೂರು ಫಿಲಾಟೆಲಿಕ್ ಕ್ಲಬ್' ಎಂಬ ಅಂಚೆಚೀಟಿ ಹವ್ಯಾಸಿಗರ ಸಂಘ ಉದ್ಘಾಟನೆಯಾಯಿತು. ಈ ಸಂಸ್ಥೆಯ ಮೊದಲ ಮೂವತ್ತು ಸದಸ್ಯರಲ್ಲಿ ರಾಯರೂ ಒಬ್ಬರಾಗಿದ್ದರು.

ತಿಂಗಳ ಎರಡನೇ ಭಾನುವಾರ ಹಿಂದಿ ಪ್ರಚಾರ ಸಭಾದಲ್ಲಿ ನಾವು ಒಟ್ಟುಸೇರುತ್ತಿದ್ದೆವು. ಈ ಸಂಸ್ಥೆಯ ಉದಯದಿಂದ ರಾಯರ ಹತ್ತಿರವಿದ್ದ ಅಂಚೆಚೀಟಿಗಳಿಗೆ ಜೀವಬಂತು. ಅವರು ಈ ಅಂಚೆಚೀಟಿಗಳನ್ನು ತಮ್ಮ ಪ್ರದರ್ಶನ ಪುಸ್ತಕಗಳಲ್ಲಿ ಇರಿಸಿ ಸಭೆಗೆ ತರುತ್ತಿದ್ದರು. ಅವರಲ್ಲಿ ಇರುವ ಅಂಚೆಚೀಟಿಗಳ ಹೆಚ್ಚಿನ ಪ್ರತಿಗಳು ಇದ್ದರೆ ಅವನ್ನು ಇತರ ಸದಸ್ಯರಿಗೆ ಕೊಡುತ್ತಿದ್ದರು. ರಾಯರ ಬಳಿ ಈಸ್ಟ್ ಇಂಡಿಯ ಕಂಪೆನಿಯ ಅಂಚೆಚೀಟಿಗಳು, ವಿದೇಶಿ ಅಂಚೆಚೀಟಿಗಳು, ಭಾರತದ ಸ್ವಾತಂತ್ರ್ಯಾನಂತರದ ಅಂಚೆಚೀಟಿಗಳು, ಪ್ರಥಮ ದಿವಸದ ಅಂಚೆ ಆವರಣಗಳು, ವಿಶೇಷ ಆವರಣಗಳು, ಕಾರ್ಡುಗಳು, ಜೊತೆಗೆ ತಿರುವಾಂಕೂರು, ಕೊಚ್ಚಿನ್, ಹೈದರಾಬಾದ್ ರಾಜ್ಯಗಳ ಅಂಚೆಚೀಟಿಗಳ ದೊಡ್ಡ ಸಂಗ್ರಹವೇ ಇತ್ತು.

### ಹೆಚ್ಚಿದ ಹುರುಪು

1976ರ ಮಾರ್ಚ್ 12ರಿಂದ 14ರ ವರೆಗೆ ಮಂಗಳೂರಿನಲ್ಲಿ ಭಾರತದಲ್ಲೇ ಪ್ರಥಮ ಬಾರಿಗೆ ಜಿಲ್ಲಾಮಟ್ಟದ ಅಂಚೆಚೀಟಿ ಪ್ರದರ್ಶನ - 'ಮಂಗಳಾಪೆಕ್ಸ್-76' ಜರುಗಿತು. ಈ ಪ್ರದರ್ಶನದಲ್ಲಿ ರಾಯರ ಸ್ವಾತಂತ್ರ್ಯಾನಂತರದ ಅಂಚೆಚೀಟಿಗಳ ಸಂಗ್ರಹಕ್ಕೆ ಕಂಚಿನ ಪದಕ ಬಂತು. ಇದರಿಂದ ಅವರ ಹುರುಪು ಇನ್ನಷ್ಟು ಹೆಚ್ಚಾಯಿತು. ಅವರು ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದ ಅಂಚೆಚೀಟಿಗಳನ್ನು ಸಂಗ್ರಹಿಸಲು ಪ್ರಾರಂಭಿಸಿದರು. ಪ್ರಾಣಿ, ಪಕ್ಷಿ, ಮೀನು, ಹೂ, ಹಣ್ಣು ಮತ್ತು 'ಭಾರತದ ಸ್ವಾತಂತ್ರ್ಯ ವೀರರು' ಎಂಬುದಾಗಿ ವಿಂಗಡಿಸಿ ಅವುಗಳನ್ನು ಪ್ರದರ್ಶಿಸುತ್ತಿದ್ದರು. ಇದರಿಂದ ಜಿಲ್ಲೆಯಾದ್ಯಂತ ಜನರಲ್ಲಿ ಅಂಚೆಚೀಟಿಗಳ ಬಗ್ಗೆ ಜಾಗೃತಿ ಮೂಡಿತು.

1981ರಿಂದ 82ರ ವರೆಗೆ ಲಕ್ಷ್ಮೀನಾರಾಯಣ ರಾಯರು 'ಮಂಗಳೂರು ಫಿಲಾಟೆಲಿಕ್ ಕ್ಲಬ್'ನ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. 1983ರಿಂದ 86ರ ವರೆಗೆ ಅದರ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದರು. ಸಂಸ್ಥೆಯ ಏಳಿಗೆಗಾಗಿ ಅವರು ಹೊಸ ಹೊಸ ಯೋಜನೆಗಳನ್ನು ಹಾಕಿಕೊಂಡರು. ಅಂಚೆಚೀಟಿಗಳ ಹರಾಜು ಮತ್ತು ಮಾರಾಟ, ಶಾಲಾಮಕ್ಕಳಿಗೆ ಕ್ಲಬ್‌ನ ಸದಸ್ಯರಾಗಲು ರಿಯಾಯಿತಿ, ಉಚಿತ ಅಂಚೆಚೀಟಿ ವಿತರಣೆ ಮೊದಲಾದವನ್ನು ಜಾರಿಗೆ ತಂದರು. 1984ರಲ್ಲಿ 'ದಾಕಾಪೆಕ್ಸ್-84' ಎಂಬ ಅಂಚೆಚೀಟಿ ಪ್ರದರ್ಶನ ರಾಯರ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ಜರುಗಿತು. ಅಹೋರಾತ್ರಿ ಅವರು ಈ ಪ್ರದರ್ಶನದ ಸಲುವಾಗಿ ದುಡಿದರು. ಈ ಪ್ರದರ್ಶನದಲ್ಲಿ ಅವರ ಸಂಗ್ರಹಕ್ಕೆ ಬಂಗಾರದ ಪದಕವೂ ಬಂತು.

> ಮಂಗಳೂರು ಫಿಲಾಟೆಲಿಕ್ ಕ್ಲಬ್‌ನ ಏಳಿಗೆಗಾಗಿ ರಾಯರು ಹೊಸ ಹೊಸ ಯೋಜನೆಗಳನ್ನು ಹಾಕಿಕೊಂಡರು. ಅಂಚೆಚೀಟಿಗಳ ಹರಾಜು ಮತ್ತು ಮಾರಾಟ, ಶಾಲಾ ಮಕ್ಕಳಿಗೆ ಕ್ಲಬ್‌ನ ಸದಸ್ಯರಾಗಲು ರಿಯಾಯಿತಿ, ಉಚಿತ ಅಂಚೆಚೀಟಿ ವಿತರಣೆ ಮೊದಲಾದವನ್ನು ಜಾರಿಗೆತಂದರು.




ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರಿಗೆ ಶ್ರದ್ಧಾಂಜಲಿ. ದಕ್ಷಿಣ ಕನ್ನಡ ಅಂಚೆಚೀಟಿ ಮತ್ತು ನಾಣ್ಯ ಸಂಗ್ರಾಹಕರ ಸಂಘದ ವಾರ್ತಾಪತ್ರ : ಅಕ್ಟೋಬರ್ - ಡಿಸೆಂಬರ್ 2002.

### ಪದಕಗಳ ಸರಮಾಲೆ

1986ರಲ್ಲಿ ರಾಯರು ಫಿಲಾಟೆಲಿಕ್ ಕ್ಲಬ್‌ನ ಅಧ್ಯಕ್ಷ ಸ್ಥಾನವನ್ನು ಒತ್ತಾಯದಿಂದ ನನಗೆ ಒಪ್ಪಿಸಿದರು. ಅವರು ಕಾರ್ಯಕಾರಿ ಸಮಿತಿಯ ಸದಸ್ಯನಾಗಿ ಮುಂದುವರಿದರು. ಆ ಸಂದರ್ಭದಲ್ಲಿ ನನಗೆ ಅವರು ಸೂಕ್ತ ಸಲಹೆ ಸೂಚನೆಗಳನ್ನು ನೀಡುತ್ತಿದ್ದರು. ನಮ್ಮ ಸಭೆ 10 ಗಂಟೆಗೆ ನಡೆಯುವುದಾದರೆ ರಾಯರು 9 ಗಂಟೆಗೇ ಹಾಜರು. ತಪ್ಪದೇ ಬರುತ್ತಿದ್ದ ಅವರು ಕಾರಣಾಂತರದಿಂದ ಸಭೆಗೆ ಬರಲು ಅನಾನುಕೂಲವಾದರೆ ನನಗೆ ಫೋನ್ ಮಾಡಿ ತಿಳಿಸುತ್ತಿದ್ದರು. ಈ ಶಿಸ್ತನ್ನು ಅವರು ಕೊನೆಯವರೆಗೂ ಉಳಿಸಿಕೊಂಡು ಬಂದರು. ಸಂಸ್ಥೆಗೆ ಆರ್ಥಿಕ ಅಡಚಣೆ ಉಂಟಾದರೆ ತಮ್ಮ ಕೈಯಿಂದಲೇ ಹಣ ಹಾಕುತ್ತಿದ್ದರು. ಇದೇ ಸಮಯದಲ್ಲಿ ಅವರು ಗಾಂಧೀಜಿ ಬಗ್ಗೆ ಅಂಚೆಚೀಟಿಗಳನ್ನು ಸಂಗ್ರಹಿಸಲು ಆರಂಭಿಸಿದರು.

ವಿವಿಧ ರಾಷ್ಟ್ರಗಳಲ್ಲಿ ಗಾಂಧೀಜಿ ಕುರಿತು ಬಿಡುಗಡೆಯಾದ ಅಂಚೆಚೀಟಿಗಳು, ಸೊವೆನಿಯರ್ ಶೀಟ್ ಮತ್ತು ಮೊದಲ ದಿನದ ಆವರಣಗಳ ಸಂಗ್ರಹ ರಾಯರಲ್ಲಿತ್ತು. ಅವರು ಹೆಚ್ಚಿನ ಎಲ್ಲಾ ಅಂಚೆಚೀಟಿಗಳನ್ನು ಪತ್ರ ಮೂಲಕ ಸಂಗ್ರಹಿಸುತ್ತಿದ್ದರು. ಗಾಂಧೀಜಿ ಕುರಿತ ಪುಸ್ತಕಗಳನ್ನೂ, ನಾಣ್ಯಗಳನ್ನೂ ಅವರು ಸಂಗ್ರಹಿಸುತ್ತಿದ್ದರು. ಸುಮಾರು 50 ದೇಶಗಳ ಗಾಂಧಿ ಅಂಚೆಚೀಟಿಗಳ ಸಂಗ್ರಹ ಅವರಲ್ಲಿತ್ತು. ರಾಯರು ಈ ಸಂಗ್ರಹಕ್ಕೆ ವಿವಿಧ ಅಂಚೆಚೀಟಿ ಪ್ರದರ್ಶನಗಳಲ್ಲಿ ಅನೇಕ ಪದಕಗಳನ್ನೂ ಪಡೆದಿದ್ದರು. ಬೆಂಗಳೂರಿನ ವಿಧಾನಸೌಧದಲ್ಲಿ ಏರ್ಪಡಿಸಿದ ರಾಜ್ಯಮಟ್ಟದ ಅಂಚೆಚೀಟಿ ಪ್ರದರ್ಶನ - 'ಕರ್ನಾಪೆಕ್ಸ್ 88'ರಲ್ಲಿ ಗಾಂಧಿ ಅಂಚೆಚೀಟಿ ಸಂಗ್ರಹಕ್ಕೆ ಬೆಳ್ಳಿ ಪದಕ, 1990ರಲ್ಲಿ ಬೆಳ್ಳಿ, ಕಂಚಿನ ಪದಕ, 1992ರಲ್ಲಿ ಮೈಸೂರಿನಲ್ಲಿ ನಡೆದ 'ಕರ್ನಾಪೆಕ್ಸ್'ನಲ್ಲಿ ಬೆಳ್ಳಿ ಪದಕ, 1994ರಲ್ಲಿ ಪುನಃ ಬೆಳ್ಳಿ, ಕಂಚಿನ ಪದಕ - ಹೀಗೆ ಅನೇಕ ಪದಕಗಳು ಅವರನ್ನು ಅರಸಿ ಬಂದವು. ರಾಯರ ಗಾಂಧಿ ಅಂಚೆಚೀಟಿ ಸಂಗ್ರಹಕ್ಕೆ ಮಾರುಹೋದ ಎಲ್ಲರೂ ಅವರನ್ನು 'ಗಾಂಧಿ' ಎಂದೇ ಕರೆಯುತ್ತಿದ್ದರು.

ಈ ಎಲ್ಲಾ ಸ್ಪರ್ಧೆಗಳಿಗೆ ನಾನು ಮತ್ತು ಲಕ್ಷ್ಮೀನಾರಾಯಣ ರಾಯರು ಮುಂಚಿತವಾಗಿ ಹೋಗಿ ಹೋಟೇಲ್‌ನಲ್ಲಿ ರೂಮ್ ಮಾಡಿ ಇರುತ್ತಿದ್ದೆವು. ಅವರೊಂದಿಗೆ ಕಳೆದ ಆ ದಿನಗಳು ನನ್ನ ಜೀವನದ ಮಹತ್ವದ ದಿನಗಳು. ಅವರ ಇಳಿವಯಸ್ಸಿನಲ್ಲೂ ಹೊಸ ಹೊಸ ವಿಷಯಗಳ ಬಗ್ಗೆ ಅಂಚೆಚೀಟಿ ಸಂಗ್ರಹದ ಹುಚ್ಚು ಅವರನ್ನು ಬಿಡಲಿಲ್ಲ. ವಿದೇಶಿ ಅಂಚೆಚೀಟಿಯಲ್ಲಿ ಭಾರತೀಯರು ಮತ್ತು ಭಾರತೀಯ ಅಂಚೆಚೀಟಿಗಳಲ್ಲಿ ವಿದೇಶೀಯರು ಎಂಬ ಹೊಸ ವಿಷಯದ ಬಗ್ಗೆ ಅಂಚೆಚೀಟಿಗಳನ್ನು ಕಲೆಹಾಕಲು ಪ್ರಾರಂಭಿಸಿದರು. ಅವರ ಅನಾರೋಗ್ಯದಿಂದಾಗಿ ಅದು ಅರ್ಧದಲ್ಲೇ ನಿಂತಿತು. 2001ರಲ್ಲಿ ನಡೆದ 'ದಾಕಾಪೆಕ್ಸ್-2001'ರಲ್ಲಿ ಮಂಗಳೂರಿನ ಹಿಂದಿ ಪ್ರಚಾರ ಸಭಾದಲ್ಲಿ ರಾಯರನ್ನು ಸಾರ್ವಜನಿಕವಾಗಿ ಸನ್ಮಾನಿಸಲಾಯಿತು. ಅವರ ಈ ಅಂಚೆಚೀಟಿ ಪ್ರೇಮ ಯುವ ಪೀಳಿಗೆಗೆ ಮಾರ್ಗದರ್ಶನ ನೀಡಲಿ ಎಂದು ಆಶಿಸುತ್ತೇನೆ.

◆

## ರೋಗಿ ಯಾರು?

ಎರಡು ವರ್ಷಗಳ ಹಿಂದೆ ಪೈಲೂರು ಲಕ್ಷ್ಮೀನಾರಾಯಣ ರಾಯರ ಆರೋಗ್ಯ ಬಿಗಡಾಯಿಸಿ ಅವರನ್ನು ಮಂಗಳೂರಿನ ಸಿಟಿ ನರ್ಸಿಂಗ್ ಹೋಮ್‌ಗೆ ಸೇರಿಸಿದ್ದರು. ಅವರ ಶ್ರೀಮತಿಯವರಿಂದ ನನಗೆ ದೂರವಾಣಿ ಕರೆ ಬಂತು. ನಾನು ಆಸ್ಪತ್ರೆಗೆ ಧಾವಿಸಿದೆ. ತುರ್ತು ನಿಗಾ ವಿಭಾಗದಲ್ಲಿ ಅವರನ್ನು ಮಲಗಿಸಿದ್ದರು. ಅವರಿಗೆ ಎಚ್ಚರವಿರಲಿಲ್ಲ. ನಾನು ಅವರ ಹತ್ತಿರ ಹೋಗಿ ಮೆಲ್ಲನೆ ಅವರ ಕೈಯನ್ನು ಸ್ಪರ್ಶಿಸಿದೆ. ಅದೇ ಸಮಯದಲ್ಲಿ ಅವರಿಗೆ ಎಚ್ಚರವಾಯಿತು. ಕೂಡಲೇ ರಾಯರು, 'ಆ... ಏನು ಪಾವಂಜೆಯವರೇ, ಹೇಗಿದ್ದೀರಿ?' ಎಂದು ನನ್ನನ್ನು ಕೇಳಿದರು. ಅವರ ಈ ಮಾತಿನಿಂದ ನನಗೆ ರೋಗಿ ಅವರಾ, ಅಲ್ಲ ನಾನಾ ಎಂಬ ಸಂಶಯ ಬಂತು.



ಎಂ.ಆರ್. ಪಾವಂಜೆ
ಗೋಪಾಲಕೃಷ್ಣ ದೇವಸ್ಥಾನ ರಸ್ತೆ
ಬಂದರ
ಮಂಗಳೂರು - 575 001








# 'ಉಸಿರಿದ್ದಷ್ಟು ಸಮಯ ದುಡಿಮೆ ಮಾಡುತ್ತಿರಬೇಕು'

■ ಸರವು ರಾಮ ಭಟ್

ಪೈಲೂರು ಲಕ್ಷ್ಮೀನಾರಾಯಣ ರಾಯರ ಬಾಲ್ಯದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ತೀರಾ ವಿರಳ. ಆಗ ಹೈಸ್ಕೂಲ್ ಮೆಟ್ಟಿಲು ಹತ್ತಿದವರು ಬೆರಳೆಣಿಕೆಯಷ್ಟು. ರಾಯರು ಪದವೀಧರ. ಬಿ.ಎ. ಓದಿದ ಅಪರೂಪದ ವ್ಯಕ್ತಿಗಳಲ್ಲಿ ಒಬ್ಬರು. ಸರಕಾರಿ ಹುದ್ದೆಗೆ ಸೇರಬಹುದಾಗಿದ್ದರೂ, ಎಲ್ಲ ಬಿಟ್ಟು 1930ರ ಉಪ್ಪಿನ ಸತ್ಯಾಗ್ರಹಕ್ಕೆ ಸೇರಿದ್ದರು.

ಆಗ ಚೊಕ್ಕಾಡಿ ಪುತ್ತೂರು ತಾಲೂಕಿಗೆ ಸೇರಿತ್ತು. ಶುದ್ಧ ಮಲೆನಾಡು. ಬೆಳ್ಳಾರೆ ಸೀಮೆ - ಪಂಜ ಸೀಮೆಯೆಂದು ಗುರುತಿಸಲ್ಪಡುವ, ಕೃಷಿಕರು ಸಾಕಷ್ಟು ಸಂಖ್ಯೆಯಲ್ಲಿದ್ದ ಊರು. ಶಿವರಾಮ ಕಾರಂತರ 'ಬೆಟ್ಟದ ಜೀವ' ಕಾದಂಬರಿಯ ಹಿನ್ನೆಲೆಯ ಊರು. ಕಾಡಿನ ತುಂಬ ತೊಡುವೆ ಜೇನು ಮತ್ತು ಹೆಜ್ಜೇನು ಕುಟುಂಬಗಳು ನೋಡಲು ಸಿಗುತ್ತಿದ್ದವು. ಪೈಲೂರರ ಸೋದರಮಾವ ಕಂಜರ್ಪಣೆ ಗೋಪಾಲಕೃಷ್ಣಯ್ಯ ಜೇನು ಕೃಷಿಕರ ಆದಾಯ ಹೆಚ್ಚಿಸಬಹುದೆಂದು ಚಿಂತಿಸಿದ ಮೊದಲಿಗರು. ಆದರೆ ಜೇನುಪೆಟ್ಟಿಗೆ ಇಟ್ಟು, ಜೇನುಸಾಕಣೆಯನ್ನು ಕೃಷಿಯಾಗಿ ಪರಿವರ್ತಿಸಿದವರಲ್ಲಿ ಪೈಲೂರರು ಮೊದಲಿಗರು. 'ಜೇನು ನೊಣ ಸಾಕುಪಿಕೆ' ಎಂಬ ಪುಸ್ತಕ ಬರೆದು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜೇನುಸಂಘದ ಸ್ಥಾಪನೆಗೆ ಚಾಲಕರಾದರು.

ಇವೆಲ್ಲದರ ಹಿಂದೆ ಇದ್ದವರು ಮೊಳಹಳ್ಳಿ ಶಿವರಾಯರು. ಸಹಕಾರಿ ಪಿತಾಮಹ ಎಂಬ ಕೀರ್ತಿಗೆ ಭಾಜನರಾದ ಇವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಲವಾರು ಸಾಮಾಜಿಕ ಕಾರ್ಯಕ್ರಮಗಳ ನೇತೃತ್ವ ವಹಿಸಿದವರು. ಶಾಲೆಗಳ ಸ್ಥಾಪನೆಯಲ್ಲದೆ, ರೈತರ ಸಾಲ-ಸೋಲಗಳಿಗೆ ಮಧ್ಯವರ್ತಿಗಳು ಕಾರಣ ಎಂದು ಕಂಡುಕೊಂಡು ಕೃಷಿಕರನ್ನು ಸಾಲದಿಂದ ರಕ್ಷಿಸಲು ಭೂ ಬ್ಯಾಂಕ್, ಕೃಷಿಕರ ಬೆಳೆಗಳ ಮಾರಾಟ ಸಂಘ ಇತ್ಯಾದಿ ಸಹಕಾರಿ ಸಂಸ್ಥೆಗಳನ್ನು ಹುಟ್ಟುಹಾಕಿದವರು. ಇವರ ಪ್ರೋತ್ಸಾಹದಿಂದ ಶಾಲೆಗಳಲ್ಲಿ ಶಿವರಾಮ ಕಾರಂತರ ಕಲಾಪ್ರಯೋಗ ಶುರುವಾಗಿ,

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೊಸ ಮನ್ವಂತರ ಪ್ರಾರಂಭವಾಯಿತು.

ಮೊಳಹಳ್ಳಿಯವರ ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘಕ್ಕೆ 1948ರಲ್ಲಿ ಪೈಲೂರರು ಕಾರ್ಯದರ್ಶಿಯಾಗಿ ಸೇರಿ, ಸುಮಾರು 25 ವರ್ಷ ಅದರ ಕರ್ಣಧಾರತ್ವ ವಹಿಸಿದರು. ಅವರ ಕಾಲದಲ್ಲಿ ಸಂಸ್ಥೆ ಅತ್ಯುನ್ನತ ಸ್ಥಿತಿಗೆ ಏರಿ, ರೈತರಿಗೆ ವರದಾನವಾಗಿ ಬೆಳೆಯಿತು. ಆಗ ಅಡಿಕೆ ಬೆಳೆಯುತ್ತಿದ್ದ ರೈತರು ತಮ್ಮ ಉತ್ಪನ್ನವನ್ನು ಮಧ್ಯವರ್ತಿಗಳಿಗೆ ಮೂರುಕಾಸಿಗೆ ಮಾರಬೇಕಾದ ಸ್ಥಿತಿ ಇತ್ತು. ರೈತರು ಅಡಿಕೆಯನ್ನು ನೇರವಾಗಿ ಮಾರುವ ವ್ಯವಸ್ಥೆಯನ್ನು ಸಂಸ್ಥೆ ಒದಗಿಸಿತು. ಲಾರಿ ಖರೀದಿಸಿ ತೋಟಗಳಿಂದ ಮಾಲು ಸಂಗ್ರಹಿಸುತ್ತಿತ್ತು. ಕಾಡುತ್ಪತ್ತಿಗಳಾದ ಅಂಟುವಾಳ ಕಾಯಿ, ಸೀಗೆಕಾಯಿ ಇತ್ಯಾದಿಗಳೂ ಮಾರಾಟದ ವಸ್ತುಗಳಾಗಿ ಬದಲಾದವು.

ಈ ಸಹಕಾರಿ ಸಂಸ್ಥೆ ಮಾರುಕಟ್ಟೆಯಲ್ಲಿ ಕ್ರಾಂತಿಯನ್ನು ಉಂಟುಮಾಡಿತು. ಜನಪ್ರತಿನಿಧಿಗಳ ಆಡಳಿತಕ್ಕೊಳಪಟ್ಟ ಈ ಸಂಸ್ಥೆಯನ್ನು ನಡೆಸುವಲ್ಲಿ ಪೈಲೂರರು ತೋರಿದ ಚಾಕಚಕ್ಯತೆ ಅವಿಸ್ಮರಣೀಯ. ಬಡವ ಮತ್ತು ಶ್ರೀಮಂತ ರೈತನೆಂಬ ತಾರತಮ್ಯವಿಲ್ಲದೆ ನಡೆಸಿಕೊಂಡರು. 'ಭೂ ಬ್ಯಾಂಕ್' ಮೊಳಹಳ್ಳಿಯವರ ಕೃಪೆಯಿಂದ ಆವಾಗಲೇ ಸ್ಥಾಪನೆಯಾಗಿದ್ದು, ಹಳೆ ಸಾಲ ತೀರಿಸುವಲ್ಲಿ, ಹೊಸ ಸಾಲ ಪಡೆಯುವಲ್ಲಿ ರೈತಾಪಿ ಜನರಿಗೆ ಸಹಕಾರ ನೀಡಿತು. ವರ್ಷದಿಂದ ವರ್ಷಕ್ಕೆ ಅಡಿಕೆಯ ಬೆಲೆ ಏರಿತು. ಪೈಲೂರರು ನಿವೃತ್ತರಾಗುವವರೆಗೂ ಸಂಸ್ಥೆ ಉಚ್ಛ್ರಾಯ ಸ್ಥಿತಿಯಲ್ಲಿತ್ತು.

ಕೆಲವೊಮ್ಮೆ ಅಡಿಕೆ ಬೆಲೆ ಕುಸಿದದ್ದಿದೆ. ಗೋವಾ ಬಿಡುಗಡೆಯ ಕಾಲದಲ್ಲಿ, ಪಾಕಿಸ್ತಾನ ಭಾರತದ ಮೇಲೆ ಯುದ್ಧ ಹೂಡಿದಾಗ, ಪೂರ್ವ ಪಾಕಿಸ್ತಾನ ಪ್ರತ್ಯೇಕವಾದಾಗ ಬೆಲೆ ಕುಸಿತ ಉಂಟಾಯಿತು. ಆಗ ಜನಪ್ರತಿನಿಧಿಗಳಲ್ಲಿ ಒಬ್ಬರಾದ ವಾರಣಾಸಿ ಸುಬ್ರಾಯ ಭಟ್ಟರು ಕೃಷಿಕರ ರಕ್ಷಣೆಗೆ ಮುಂದಾದರು. ಸಹಕಾರಿ ತತ್ವದ ಮೇಲೆ ಕ್ಯಾಂಪ್ಕೋ ಕಟ್ಟಿ ಬೆಳೆಸಿದರು. ಬೆಲೆ ಕುಸಿತ ತಡೆಯುವಲ್ಲಿ ಇದು ಸಾರ್ಥಕ ಕೆಲಸ ಮಾಡಿತು. ಪೈಲೂರರ ನಿವೃತ್ತಿಯ ನಂತರ ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘ ತನ್ನ ಅಸ್ತಿತ್ವ ಕಳೆದುಕೊಂಡಿಲ್ಲವಾದರೂ, ಖ್ಯಾತಿ ಕಳೆದುಕೊಂಡಿದೆ. ಆ ಸ್ಥಾನದಲ್ಲಿ ಕ್ಯಾಂಪ್ಕೋ ನಿಂತಿದೆ.

ಈ ಮೇಲಿನದಷ್ಟನ್ನೇ ಹೇಳಿದರೆ ಪೂರ್ಣ ಪೈಲೂರರನ್ನು ಕಂಡಂತಾಗುವುದಿಲ್ಲ. ಅವರ ಕರ್ತವ್ಯಗಳೊಡನೆ ಹವ್ಯಾಸಗಳು ಬೆಸೆದುಕೊಂಡಿದ್ದವು. ಹುಟ್ಟಿ ಬೆಳೆದದ್ದು ಕಾಡಿನ ಸರಹದ್ದಿನಲ್ಲಿ. ಅವರನ್ನು ಮದುವೆಯಾದ ಹೆಣ್ಣುಮಗಳು ಬಂದದ್ದು ಕಾಡಿನಂಚಿನ ಕಟ್ಟ, ಎಂಬ ಊರಿನಿಂದ. ಇದು ಕಾರಂತರ 'ಬೆಟ್ಟದ ಜೀವ'ದ ತಾಣ. ಪೈಲೂರರ ಮಾವ ಗೋವಿಂದಯ್ಯ, ಶಿವರಾಮ ಕಾರಂತರ ಆತ್ಮೀಯ. ಈಗ ಹುಡುಕಿದರೂ ಕಣ್ಣಿಗೆ ಬೀಳಲೊಲ್ಲದ ಹಲವು ಅಪರೂಪದ ಹಕ್ಕಿಗಳೂ ಸೇರಿದಂತೆ ಹಲವು ಜಾತಿಯ ಹಕ್ಕಿಗಳನ್ನು ಅವರು ಸಾಕಿದ್ದರು. ಗುಲಾಬಿ ಮೊದಲಾದ ವಿವಿಧ ಹೂಗಳನ್ನು ಬೆಳೆಸಿದ್ದರು. ಅಂಚೆಚೀಟಿ ಜೋಡಣೆಯನ್ನು ಅಂದಿನ ದಿನಗಳಲ್ಲೇ ಮಾಡುತ್ತಿದ್ದರು. ಪೈಲೂರರು ತುಂಬಾ ಚಟುವಟಿಕೆಯವರು. ವೇಗದ ಸ್ವಭಾವ. ಅವರ ಜೀವನದ ಸಂದೇಶವೇನಿರಬಹುದೆಂದು ಪ್ರಶ್ನಿಸಿದರೆ ನನಗೆ ಕಾಣುತ್ತದೆ, 'ಉಸಿರಿದ್ದಷ್ಟು ಸಮಯ ದುಡಿಮೆ ಮಾಡುತ್ತಿರಬೇಕು.'

◆

*(ಸೌಜನ್ಯ : ವಿಜಯ ಕರ್ನಾಟಕ - ಡಿಸೆಂಬರ್ 25, 2002)*



**ಸರವು ರಾಮ ಭಟ್**
'ಜಾಹ್ನವಿ'
ಅಂಚೆ : ಸಂಪಾಜೆ - 574 234
ಕೊಡಗು ಜಿಲ್ಲೆ



# ಅನನ್ಯ ಸಾಂಗತ್ಯ - ಪರಿಪಕ್ವ ಮಿತ್ರತ್ವ

- ಕೈಂತಜೆ ವೆಂಕಟ್ರಮಣ ಭಟ್ಟ

ಪೈಲೂರು ಲಕ್ಷ್ಮೀನಾರಾಯಣ ರಾಯರನ್ನು ಎಲ್ಲರೂ 'ಪೈಲೂರ್‌ರವರು' ಎಂದೇ ಕರೆಯುತ್ತಿದ್ದರು. ಎಷ್ಟೋ ಜನರಿಗೆ ಅವರ ಪೂರ್ಣ ಹೆಸರು ಕೂಡ ಗೊತ್ತುಂಟೋ ಇಲ್ಲವೋ ಎಂದು ನನಗೆ ಸಂಶಯವಿದೆ. ಅವರು ಎಲ್ಲರನ್ನೂ ಮಿತ್ರಭಾವದಿಂದಲೇ ನೋಡುತ್ತಿದ್ದುದರಿಂದಲೂ, ಹಾಗೆಯೇ ಮಾತನಾಡುತ್ತಿದ್ದುದರಿಂದಲೇ ಅವರನ್ನು ಎಲ್ಲರೂ ಪೈಲೂರ್‌ರವರು ಎಂದು ಗೌರವ ಭಾವನೆಯಿಂದ ಕರೆಯುತ್ತಿದ್ದರು. ಅವರು ತಮ್ಮ ಜೀವನದಲ್ಲಿ ಸಂಪರ್ಕ ಹೊಂದಿದವರೆಲ್ಲರನ್ನೂ ಮಿತ್ರರನ್ನಾಗಿಯೇ ಕಂಡವರು.

ನನಗೂ ಅವರಿಗೂ ಇದ್ದ ಮಿತ್ರತ್ವದ ಕಾಲ ಐದು ದಶಕಗಳಿಗೂ ಮೀರಿದ್ದಾಗಿದೆ. ನಾನು 1946ನೇ ಇಸವಿಯಲ್ಲೇ ಅವರ ಪರಿಚಯ ಹೊಂದಿದ್ದರೂ, ನಮ್ಮ ನಿಕಟ ಸಂಪರ್ಕವಾದುದು 1948ರ ನಂತರವೇ ಆಗಿದೆ. ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘದಲ್ಲಿ ಅವರು ಕಾರ್ಯದರ್ಶಿಯಾಗಿಯೂ, ನಾನು ಜತೆ ಕಾರ್ಯದರ್ಶಿ ಯಾಗಿಯೂ 1948ನೇ ಇಸವಿಯಿಂದ 1972ರ ತನಕ 24 ವರ್ಷಗಳ ಕಾಲ ಒಂದೇ ಕಚೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದೆವು. ಅವರ ಕಚೇರಿಯು ಕೆಳಗೆ ಇದ್ದರೆ ನನ್ನದು ಮಾಳಿಗೆಯಲ್ಲಿತ್ತು. ನಾವು ಪ್ರತಿದಿನವೂ ಹಲವು ಬಾರಿ ಮುಖತಃ ಅಥವಾ ದೂರವಾಣಿ ಮೂಲಕ ಮಾತನಾಡಿಕೊಳ್ಳುವ ಅಗತ್ಯ ಮತ್ತು ಅನುಕೂಲತೆ ಇತ್ತು. ಇಷ್ಟು ದೀರ್ಘ ಕಾಲ ನಮ್ಮ ಸಂಪರ್ಕವಿದ್ದರೂ ನಮ್ಮೊಳಗೆ ಎಂದೂ ಮನಸ್ತಾಪ ಬಂದುದಿಲ್ಲ. ನಮ್ಮ ಮೈತ್ರಿಯು ವೃದ್ಧಿಯಾಗುತ್ತಲೇ ಹೋಗುತ್ತಿತ್ತು. ಅವರು ನನ್ನಲ್ಲಿ ಅಷ್ಟು ವಿಶ್ವಾಸವನ್ನು ಇಟ್ಟಿದ್ದರು. ಸಂಸ್ಥೆಯ ವ್ಯವಹಾರಗಳಲ್ಲಿ ಅವರಿಗೂ ನನಗೂ ಕೆಲವು ಸಂದರ್ಭಗಳಲ್ಲಿ ಅಭಿಪ್ರಾಯ ಭೇದ ಬಂದರೂ ಅದನ್ನು ನಾವು ಮಾತನಾಡಿಕೊಂಡು ಪರಿಹರಿಸಿಕೊಳ್ಳುತ್ತಿದ್ದೆವು. ಅವರಲ್ಲಿ ಕೊಡು-ಕೊಳ್ಳುವ ಮನೋಭಾವವಿತ್ತು. ಅವರು ಮನಸ್ಸಿಗೆ ಕಂಡದ್ದನ್ನು ಹೇಳಿ ಸಂಶಯ ಪರಿಹರಿಸಿಕೊಳ್ಳುತ್ತಿದ್ದರು. ಅವರು ಕಾರ್ಯದರ್ಶಿ ಸ್ಥಾನದಲ್ಲಿದ್ದರೂ ಎಂದೂ ನನ್ನ ಕಾರ್ಯಕ್ಷೇತ್ರದಲ್ಲಿ ಅಥವಾ ನನ್ನ ಕಾರ್ಯಗಳಲ್ಲಿ ಹಸ್ತಕ್ಷೇಪ ಮಾಡುತ್ತಿರಲಿಲ್ಲ. ಅವರು ನನ್ನಲ್ಲಿಟ್ಟ ಪ್ರೀತಿ ವಿಶ್ವಾಸವೇ ಇದಕ್ಕೆ ಮುಖ್ಯ ಕಾರಣ ಎಂದು ನನಗನ್ನಿಸುತ್ತದೆ. ಅವರು ನನ್ನಲ್ಲಿಟ್ಟ ವಿಶ್ವಾಸಕ್ಕೆ ನಾನು ಅವರಿಗೆ ಸದಾಕಾಲ ಕೃತಜ್ಞನಾಗಿರುವೆನು.

1972ರಲ್ಲಿ ಅವರು ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘ(ಎಲ್ಲರೂ ಸೊಸೈಟಿ ಎಂದು ಕರೆಯುತ್ತಿದ್ದರು)ದಿಂದ ನಿವೃತ್ತಿ ಹೊಂದಿದರು. ಅದರ ನಂತರ 1978ರ ತನಕ ಅವರ ಸ್ಥಾನದಲ್ಲಿ ನಾನು ಕಾರ್ಯದರ್ಶಿಯಾಗಿದ್ದೆನು.

1978ರಲ್ಲಿ ನಾನೂ ನಿವೃತ್ತಿ ಹೊಂದಿದೆನು. ಅವರು ಬೇರೆ ಕಡೆಯಲ್ಲಿ ಇತರರ ಜೊತೆಗೂಡಿ ಅಡಿಕೆ ವ್ಯಾಪಾರವನ್ನು ಕೆಲವು ವರ್ಷಗಳ ಕಾಲ ನಡೆಸಿದರು. ಆಗಲೂ ನಮ್ಮೊಳಗಿನ ಸ್ನೇಹ ಸಂಪರ್ಕ ಮುಂದುವರಿಯುತ್ತಲೇ ಇತ್ತು. ಆಗಾಗ ಸೊಸೈಟಿಯ ವಿಷಯ ನನ್ನೊಡನೆ ವಿಚಾರಿಸಿ ತಿಳಿದುಕೊಳ್ಳುತ್ತಿದ್ದರು. ನಮ್ಮೊಳಗಿನ ಸಂಪರ್ಕದಲ್ಲಿ ನಾನು ಅವರಲ್ಲಿ ಕಂಡ ವಿಶೇಷ ಗುಣಗಳಲ್ಲಿ ಮುಖ್ಯವಾದವುಗಳನ್ನು ಕೆಳಗೆ ಪ್ರಸ್ತಾಪಿಸುತ್ತಿದ್ದೇನೆ.

**ಕಾರ್ಯನಿಷ್ಠೆ - ಪ್ರಾಮಾಣಿಕತೆ**

ಪೈಲೂರರು ತುಂಬಾ ಶ್ರಮಜೀವಿ, ಕರ್ಮಯೋಗಿ. ಒಂದು ನಿಮಿಷ ಕೂಡಾ ಅವರು ಸುಮ್ಮನಿದ್ದುದನ್ನು ನಾನು ಕಂಡಿಲ್ಲ. ಅವರು ಜೇನುಸಾಕಣೆಯಲ್ಲಿ ವಿಶೇಷ ಆಸಕ್ತಿ ಹೊಂದಿದ್ದು, ತಾವೂ ಜೇನುನೊಣಗಳಂತೆ ನಿರಂತರ ಕಾರ್ಯಮಗ್ನರಾಗಿದ್ದರು. ಅವರು ಕಚೇರಿಗೆ ಹೆಚ್ಚಾಗಿ ಬೆಳಿಗ್ಗೆ 7.30 ಅಥವಾ 8 ಗಂಟೆಗೇ ಬಂದು, ಕಚೇರಿಯ ಬಾಗಿಲನ್ನು ತಾವೇ ತೆರೆದು ಕಾರ್ಯಕ್ಕೆ ತೊಡಗುತ್ತಿದ್ದರು. ಅವರಿಗೆ ಆಫೀಸು ಅವಧಿಯ ನಿಯಮ ಇಲ್ಲ. ಎಲ್ಲರಿಗಿಂತ ಮುಂಚೆ ಬರುತ್ತಿದ್ದರು. ಗೋದಾಮುಗಳ ಒಳಹೊಕ್ಕು ಕುಳವಾರುಗಳು ಕಳಿಸಿದ ಅಡಿಕೆಯನ್ನು ಕತ್ತರಿಸಿ ಅದರ ಗುಣಪರೀಕ್ಷೆಯನ್ನು ಆಗಾಗ ಮಾಡುತ್ತಿದ್ದರು. ಆಯಾ ಬೆಳೆಗಾರರಿಗೆ ಅದನ್ನು ವಿವರಿಸಿಯೂ ಹೇಳುತ್ತಿದ್ದರು. ಮಾರಾಟ ಮಾಡುವಾಗ ಪ್ರತಿ ಬುಟ್ಟಿಯಲ್ಲಿರುವ ಅಡಿಕೆಯನ್ನು ಮಾರಾಟಕ್ಕಿಂತ ಮುಂಚೆ ಪರೀಕ್ಷಿಸಿ ನೋಡುತ್ತಿದ್ದರು. ಮಾರಾಟದ ಕೆಲಸವನ್ನು ಅತ್ಯಂತ ನಿಷ್ಠೆಯಿಂದ ಮಾಡುತ್ತಿದ್ದರು. ಇದರಿಂದಾಗಿಯೇ ಅವರು ಅಡಿಕೆ ಬೆಳೆಗಾರರ ಮೆಚ್ಚುಗೆಗೆ ಪಾತ್ರರಾಗಿದ್ದರು.



ಪೈಲೂರರು ಅತ್ಯಂತ ಪ್ರಾಮಾಣಿಕ ವ್ಯಕ್ತಿಯಾಗಿದ್ದರು. ಯಾವ ವಿಧದ ಪ್ರಲೋಭನೆಗಳಿಂದಲೂ ಅವರನ್ನು ಇತರರಿಗೆ ವಶೀಕರಣ ಮಾಡಲಾಗುತ್ತಿರಲಿಲ್ಲ. ಸೊಸೈಟಿಯ ಉದ್ಯೋಗದಲ್ಲಿದ್ದಾಗ ನಿರಂತರವಾಗಿ ಅದರ ಹಿತಚಿಂತನೆಯಲ್ಲೇ ಇದ್ದರು; ಕಾರ್ಯವನ್ನೂ ಮಾಡಿದ್ದರು. ಇದರಿಂದಾಗಿಯೇ ಸೊಸೈಟಿಯು ಅವರ ಕಾಲದಲ್ಲಿ ಅತ್ಯಂತ ಏಳಿಗೆಯ ಸ್ಥಿತಿಯಲ್ಲಿದ್ದು ಸತ್ಕೀರ್ತಿಗೆ ಪಾತ್ರವಾಯಿತು.

ಪೈಲೂರರದ್ದು ತ್ಯಾಗ ಮನೋಭಾವನೆ. ಪರೋಪಕಾರವೇ ಅವರ ಜೀವನದ ಉಸಿರಾಗಿತ್ತು. ಅವರು ಯಾರಿಗೂ ಎಂದೂ 'ಇಲ್ಲ' ಎಂದು ಹೇಳಲಿಲ್ಲ. ಹಲವಾರು ಜನರು ಅವರಿಂದ ಬೇರೆ ಬೇರೆ ರೀತಿಯಲ್ಲಿ ಉಪಕಾರ ಹೊಂದಿದ್ದನ್ನು ನಾನು ಕಂಡಿದ್ದೇನೆ. ಎಲ್ಲರಿಗೂ ಅವರು ತುಂಬು ಹೃದಯದ ಸ್ವಾಗತ ನೀಡುತ್ತಿದ್ದರು. ಪ್ರೀತಿಯಿಂದ ಮಾತನಾಡುತ್ತಿದ್ದರು. ಅವರ ಮನೆಯಲ್ಲಿ ಸದಾಕಾಲ ಅತಿಥಿ ಸತ್ಕಾರವಿತ್ತು. ಇತರರಿಗೆ ಕೊಟ್ಟಷ್ಟೂ ಅವರಿಗೆ ಸಂತೋಷ ಹೆಚ್ಚಾಗುತ್ತಿತ್ತು.

**ಸೈಕಲ್ ಸವಾರಿ!**

ಆ ದಿನಗಳಲ್ಲಿ ಪೈಲೂರರಿಗೆ ಒಂದು ಸೈಕಲ್ ಇತ್ತು. ನನಗೂ ಸೈಕಲ್ ಇತ್ತು. ನಾನೂ ಅವರೂ ಎಷ್ಟೋ ವರ್ಷಗಳ ಕಾಲ ಜೊತೆಜೊತೆಯಾಗಿ ಸೈಕಲ್‌ಗಳಲ್ಲಿ ಕಚೇರಿಗೆ ಹೋಗುತ್ತಿದ್ದೆವು. ನಾನು ಬೆಳಿಗ್ಗೆ ಅಂದಾಜು 8 ಗಂಟೆಗೆ ಅವರ ಮನೆಗೆ ಬಂದಾಗ ನನಗೋಸ್ಕರ ಒಂದು ಲೋಟ ಕಾಫಿಯನ್ನು ತಯಾರಿಸಿ ಇಡುತ್ತಿದ್ದರು. ಅದನ್ನು ಕುಡಿದು, ನಾನೂ ಅವರೂ ಜೊತೆಯಾಗಿ ಕಚೇರಿಗೆ ಹೋಗುವ ಕಾರ್ಯಕ್ರಮವಿತ್ತು. ನಾನು ಅವರಲ್ಲಿ ಎಷ್ಟು ಬಾರಿ ಕಾಫಿ ಕುಡಿದಿದ್ದೇನೋ ಏನೋ! ಅದನ್ನು ಈಗ ನೆನಪಿಸುವಾಗ ನನಗೆ ವಿಚಿತ್ರವಾಗಿ ಕಾಣುತ್ತದೆ; ಅಂತಹ ಮೈತ್ರಿ ನಮ್ಮೊಳಗೆ ಇತ್ತು. ಅವರು ಎಂದೂ 'ಇಲ್ಲ' ಎಂದು ತೋರಿಸಲಿಲ್ಲ. ನಂತರ ಅವರು

ಮೋಟಾರು ಕಾರನ್ನು ಪಡಕೊಂಡಾಗ ಈ ಕ್ರಮ ನಿಂತಿತು. ನಾವು ಎಷ್ಟೋ ಸಲ ಜೊತೆಯಾಗಿ ಹಲವಾರು ಸಭೆ ಸಮಾರಂಭಗಳಿಗೆ, ವಿವಾಹ ಇತ್ಯಾದಿ ಕಾರ್ಯಕ್ರಮಗಳಿಗೆ ಹೋಗುತ್ತಿದ್ದೆವು. ಮಾತನಾಡಿಕೊಂಡೇ ಇದ್ದೆವು. ಯಾವ ಸಣ್ಣ ವಿಷಯವನ್ನಾಗಲೀ ಅವರು ನನಗೆ ತಿಳಿಸದೇ ಇರುತ್ತಿರಲಿಲ್ಲ. ನಾನೂ ಅಷ್ಟೇ. ನಮ್ಮೊಳಗೆ ವಿಚಾರ ವಿನಿಮಯ ಆದ ಮೇಲೆಯೇ ಮನಸ್ಸಿಗೆ ಸಮಾಧಾನ. ಈಗ ಅದನ್ನು ನೆನಪಿಸುವಾಗ ಮೈ ರೋಮಾಂಚನವಾಗುತ್ತದೆ. ಪೈಲೂರರ ವ್ಯಕ್ತಿತ್ವ ಅಂಥದ್ದು.

ಪೈಲೂರರು ಸರಳ ಜೀವನವನ್ನು ನಡೆಸಿದರು. ಅವರು ಅನುಕೂಲವಿದ್ದರೂ ಆಡಂಬರದ ಜೀವನ ಬೇಡ ಎಂದವರು. ಸಾದಾ ಉಡುಪನ್ನೇ ಧರಿಸಿದವರು. ಶಿಸ್ತಿನ ಜೀವನವನ್ನು ನಡೆಸಿದವರು. ಸಮಯಕ್ಕೆ ಬೆಲೆ ಕೊಡುತ್ತಿದ್ದರು. ಸ್ವಾಭಿಮಾನವನ್ನು ರಕ್ಷಿಸಿಕೊಂಡವರು. ಅವರು ಸೊಸೈಟಿ ಉದ್ಯೋಗದಲ್ಲಿದ್ದಾಗ, ಕೊನೆಗೆ ಆಗಿನ ಆಡಳಿತ ಮಂಡಳಿಯವರ ಪೈಕಿ ಕೆಲವರೊಡನೆ ಮತಭೇದ ಉಂಟಾದಾಗ ಉದ್ಯೋಗವನ್ನೇ ತ್ಯಜಿಸಿದರು.

ಪೈಲೂರರು ಯಾರಿಗೂ ಕೇಡು ಬಗೆಯುತ್ತಿರಲಿಲ್ಲ. ಇತರರು ಅವರಿಗೆ ಕೇಡು ಮಾಡಿದರೂ, 'ಅವರವರ ಕರ್ಮಫಲವನ್ನು ಅವರವರೇ ಉಣ್ಣುವರು - ನಾವು ಯಾಕೆ ಅವರಿಗೆ ಕೇಡು ಬಗೆಯಬೇಕು?' ಎಂದು ನನ್ನೊಡನೆ ಹೇಳುತ್ತಿದ್ದರು. 'ಸರ್ವೇ ಜನಾಃ ಸುಖಿನೋ ಭವಂತು' ಎಂಬ ಮಾತನ್ನು ಅವರು ಬಾಯಲ್ಲಿ ಆಡದೆ, ಕಾರ್ಯದಲ್ಲಿ ಆಚರಿಸುತ್ತಿದ್ದರು.

ಪೈಲೂರರ ಮಡದಿ ಪರಮೇಶ್ವರಿ ಅಮ್ಮನವರ ಕುರಿತು ನಾನು ಒಂದು ಮಾತನ್ನು ಹೇಳಲೇಬೇಕಾಗುತ್ತದೆ. ಅವರು ನನಗೆ ಪೂಜ್ಯರು. ಅವರು ಪೈಲೂರರಿಗೆ ನಿರಂತರವಾಗಿ ಜೀವನದುದ್ದಕ್ಕೂ ಸಹಕಾರವನ್ನು ಕೊಟ್ಟವರು. ನಾನು ಇದನ್ನು ಪ್ರತ್ಯಕ್ಷವಾಗಿ ನೋಡಿದವನಾಗಿದ್ದೇನೆ. ಪೈಲೂರರು ಕೊನೆಯ ಎರಡು ವರ್ಷಗಳಲ್ಲಿ ಅಸೌಖ್ಯದಿಂದ ತುಂಬಾ ಬಳಲಿದ್ದರು. ನಾನು ನನ್ನ ಮಡದಿ ಸಮೇತ ಹಲವು ಬಾರಿ ಅವರನ್ನು ಆಸ್ಪತ್ರೆ ಹಾಗೂ ಅವರ ಮನೆಯಲ್ಲಿ ಕಂಡು ಮಾತನಾಡಿದ್ದೆ. ಪ್ರತಿ ತಿಂಗಳೂ ತಪ್ಪದೆ ಒಮ್ಮೆ, ಹಲವಾರು ಸಲ ವಾರಕ್ಕೊಮ್ಮೆ ಹೋಗಿ ನೋಡಿ ಮಾತನಾಡಿ ಬಂದಿದ್ದೆವು. ಪೈಲೂರರು ಪ್ರತಿಬಾರಿಯೂ ಪ್ರೀತಿಯಿಂದ ನಮ್ಮೊಡನೆ ಮಾತನಾಡುತ್ತಿದ್ದರು.

ಕೊನೆಯ ಬಾರಿ, ತಾರೀಕು 7.12.2002ರಂದು ನಾನು ಅವರನ್ನು ಕಂಡಾಗ ಬಹಳ ದುಃಖ ಉಂಟಾಯಿತು. ಏಕೆಂದರೆ ಅವರು ತುಂಬಾ ಶಕ್ತಿಹೀನರಾಗಿದ್ದು, ಮಾತನಾಡುವುದಕ್ಕೂ ಚೈತನ್ಯವಿರಲಿಲ್ಲ. ನನ್ನ ಮತ್ತು ನನ್ನ ಪತ್ನಿಯ ಗುರುತು ಮಾತ್ರ ಅವರಿಗೆ ಸಿಕ್ಕಿತ್ತು. ಮೆಲ್ಲನೆ ನನ್ನ ಹೆಸರನ್ನು ಮಾತ್ರ ಹೇಳಿದ್ದರು. ಅದೇ ನಮ್ಮ ಕೊನೆಯ ದರ್ಶನ. ಮರುದಿನ ಅಪರಾಹ್ನ ನನಗೆ ದೂರವಾಣಿಯಲ್ಲಿ ಕರೆ ಬಂದೊಡನೆ ಅವರ ಮನೆಗೆ ಹೋದಾಗ ಅವರ ನಿರ್ಜೀವ ದೇಹವನ್ನು ನೋಡಬೇಕಾಯಿತು. ಇನ್ನು ಆ ದೇಹವೂ ಕಾಣಸಿಗಲಾರದು. ಅವರ ನೆನಪು ಮಾತ್ರ ನನಗೆ ಸ್ಫೂರ್ತಿಯ ಸೆಲೆಯಾಗಿ ನನ್ನ ಮನಸ್ಸಿನಲ್ಲಿ ಸದಾ ನಿಂತಿರುತ್ತದೆ.





**ಕೈಂತಜೆ ವೆಂಕಟ್ರಮಣ ಭಟ್ಟ**
ಮನೆ ನಂ. 3-24
ಕೆಪಿಟಿ ಹಾಸ್ಟೆಲ್ ಎದುರು
ಕದ್ರಿ ಗುಡ್ಡ, ಮಂಗಳೂರು - 575 004



# ಪೈಲೂರು : ಯಾರಿರ್ತಾರೆ ಇಂಥವರು!

ಬಿ.ಎಂ. ಇದಿನಬ್ಬ

ಪೈಲೂರು ಲಕ್ಷ್ಮೀನಾರಾಯಣ ರಾಯರು ಒಂದು ನಿಮಿಷ ಹಾಳು ಮಾಡಿದವರಲ್ಲ. ನಾನು ಬಾಲಕನಾಗಿದ್ದಾಗ ಬಾಲವನದಲ್ಲಿ ಶಿವರಾಮ ಕಾರಂತರ ವ್ಯಕ್ತಿತ್ವವನ್ನು ಕಂಡಿದ್ದೇನೆ. ಕಾರಂತರ ನಂತರ ಈ ಜಿಲ್ಲೆಯಲ್ಲಿ ಅಂತಹ ಒಂದು ವ್ಯಕ್ತಿತ್ವ ಇರುವುದಿದ್ದರೆ ಅದು ರಾಯರದ್ದು. ನಾನು ಅವರೊಂದಿಗೆ 28 ವರ್ಷ ಕೆಲಸ ಮಾಡಿದ್ದೇನೆ. ಹಾಗಾಗಿ ಅವರನ್ನು ತೀರ ಹತ್ತಿರದಿಂದ ಬಲ್ಲೆ.

ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘ ಇವತ್ತು ಉಳೀಲಿಕ್ಕೆ ಕಾರಣ ಮೊಳಹಳ್ಳಿ ಶಿವರಾಯರು. ವರ್ತಕರಿಂದಾಗಿ ನಮ್ಮ ಅಡಿಕೆ ಬೆಳೆಗಾರರು ಹಾಳಾಗಿಹೋಗ್ತಾರೆ ಎಂಬ ನಂಬಿಕೆಯಿಂದ ಶಿವರಾಯರು ಈ ಸಂಘವನ್ನು ಸ್ಥಾಪಿಸಿದರು. ಅದಕ್ಕೆ ಕಾರ್ಯದರ್ಶಿಗಳಾಗಿ ನಮ್ಮ ಲಕ್ಷ್ಮೀನಾರಾಯಣ ರಾಯರು ಇದ್ದರು. ಒಳ್ಳೆಯ ರೀತಿಯಲ್ಲಿ

ಕೆಲಸ ಮಾಡಿದ್ರು. ಅವರ ಸೇವೆಯನ್ನು ಅಡಿಕೆ ತೋಟಗಾರರು ಇವತ್ತು ಮರೆತಿರಬಹುದು. ಆದರೆ ಅವರು ಮಾಡಿದಂಥ ಸೇವೆಯಲ್ಲದಿದ್ದರೆ ಅಡಿಕೆ ಬೆಳೆಗಾರರು ಯಾವಾಗಲೋ ಏನೋ ಆಗಿ ಹೋಗ್ತಿದ್ರು. ಆ ಕಾಲದಲ್ಲಿ... ವರ್ತಕರದ್ವೇ ಛಾಪು ಇದ್ದ ಕಾಲದಲ್ಲಿ ಅಷ್ಟೊಂದು ಒಳ್ಳೆಯ ರೀತಿಯಲ್ಲಿ ನಮ್ಮ ಕೃಷಿಕರಿಗೆ ಒಳ್ಳೆಯದಾಗಬೇಕು, ಸಂಘ ಒಳ್ಳೆಯದಾಗಬೇಕು ಅಂತ ಕೆಲಸ ಮಾಡಿದವರು ಮೊಳಹಳ್ಳಿ ಶಿವರಾಯರು ಮತ್ತು ಪೈಲೂರು ಲಕ್ಷ್ಮೀನಾರಾಯಣ ರಾಯರು.

### ಆಡುಮುಟ್ಟದ ಸೊಪ್ಪಿಲ್ಲ

ಶಿವರಾಮ ಕಾರಂತರು ಮುಟ್ಟದ ಕ್ಷೇತ್ರ ಇಲ್ಲ ಅಂತಲೇ ಗಾದೆಯಾಗಿದೆ. ಅದೇ ರೀತಿಯಲ್ಲಿ ಲಕ್ಷ್ಮೀನಾರಾಯಣರು ಕೂಡ. ಅವರು ಒಳ್ಳೆಯ ಬರಹಗಾರರು. ಬರೀಲಿಕ್ಕೆ ಹೋಗಿದ್ರೆ ದೊಡ್ಡ ಸಾಹಿತಿ ಆಗ್ತಿದ್ರು. ಏನೆಲ್ಲ ಬರೀಲಿಕ್ಕೆ ಸಾಧ್ಯ ಇತ್ತು ಅವರಿಗೆ! ಯಾವತ್ತೂ ಎಲೆಯ ಮರೆಯ ಕಾಯಿಯಾಗಿಯೇ ಇದ್ದದ್ದು ರಾಯರ ವಿಶೇಷ.

ಬಹಳ ಚುರುಕು. ನಿಗದಿತ ಸಮಯಕ್ಕಿಂತ ಐದು ನಿಮಿಷ ಮೊದಲೇ ಅವರು ರೆಡಿ. ಆಫೀಸಿಗೆ ಒಂದು ದಿವಸ ಕೂಡ ಅವರು ತಡಮಾಡಿ ಬಂದದ್ದಿಲ್ಲ. ಹೋಗುವಾಗ ಕೂಡ ಎಲ್ಲರೂ ಹೋದಮೇಲೆಯೇ ಅವರು ಹೋಗುತ್ತಿದ್ದುದು. ಪ್ರತಿಯೊಂದು ಕೆಲಸವನ್ನೂ ಅಂದಂದೇ ಮುಗಿಸಬೇಕೆಂಬ ಛಲ. ಯಾರಿರ್ತಾರೆ ಇಂಥವರು!

ನನ್ನನ್ನವರು ಸಾಹೇಬ್ರೇ ಅಂತ ಕರೆಯುತ್ತಿದ್ದರು. ಆ ಸಂದರ್ಭದಲ್ಲಿ ನಾನು ಲೇಖನಗಳನ್ನೇನಾದರೂ ಬರೆದರೆ ನನ್ನನ್ನು ತಮ್ಮ ಹತ್ತಿರ ಕೂರಿಸಿ, 'ಸಾಹೇಬ್ರೇ ಇನ್ನೂ ಬರೀರಿ, ಇನ್ನೂ ಬರೀರಿ' ಎಂದು ಪ್ರೋತ್ಸಾಹಿಸುತ್ತಿದ್ದರು. ಅವರ ದೇಶಪ್ರೇಮ, ಗಾಂಧೀಜಿಯವರ ಮೇಲಿನ ಅಭಿಮಾನ ಅನನ್ಯ.



ಕಾರಂತರ ನಂತರ ಈ ಜಿಲ್ಲೆಯಲ್ಲಿ ಅಂತಹ ಒಂದು ವ್ಯಕ್ತಿತ್ವ ಇರುವುದಿದ್ದರೆ ಅದು ರಾಯರದ್ದು. ನಾನು ಅವರೊಂದಿಗೆ 28 ವರ್ಷ ಕೆಲಸ ಮಾಡಿದ್ದೇನೆ. ಹಾಗಾಗಿ ಅವರನ್ನು ತೀರ ಹತ್ತಿರದಿಂದ ಬಲ್ಲೆ. ಪ್ರತಿಯೊಂದು ಕೆಲಸವನ್ನೂ ಅಂದಂದೇ ಮುಗಿಸಬೇಕೆಂಬ ಛಲ. ಯಾರಿರ್ತಾರೆ ಇಂಥವರು!

### ಪ್ರೀತಿಯ ಘಟನೆ

ಆ ಕಾಲದಲ್ಲಿ ರಾಯರು ನನಗೆ ಮಾಡಿದ ಒಂದು ಉಪಕಾರವನ್ನು ನಾನು ನೆನೆಯಲೇಬೇಕು. 1962ನೇ ಇಸವಿ. ಆಗ ವಿಧಾನ ಸಭೆಗೆ ಉಳ್ಳಾಲ ಕ್ಷೇತ್ರದಿಂದ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ನಾನು ಸ್ಪರ್ಧೆ ಗಿಳಿಯುವಂತೆ ಎಸ್. ನಿಜಲಿಂಗಪ್ಪನವರು ಕೆ.ಕೆ. ಶೆಟ್ಟರ ಬಳಿ ಪ್ರಸ್ತಾಪಿಸಿದ್ದರು. ಅದಕ್ಕೆ ಶೆಟ್ಟರು, 'ಅವನಲ್ಲಿ ಹೇಳಿಯಾಗಿದೆ. ಅವನ ಜೀವನ ಕಷ್ಟದಲ್ಲಿದ್ದು, ಚುನಾವಣೆಗೆ ಸ್ಪರ್ಧಿಸಲು ಒಪ್ಪುತ್ತಿಲ್ಲ' ಎಂದಿದ್ದರು.

ಹೀಗಿದ್ದಾಗ ಒಂದು ದಿನ ಲಕ್ಷ್ಮೀನಾರಾಯಣರು ನನ್ನ ಬಳಿ 'ಉಳ್ಳಾಲದಿಂದ ಯಾರು ನಿಲ್ತಾರೆ' ಎಂದು ಕೇಳಿದರು. ಯಾರೂ ಮುಂದೆಬಂದಿಲ್ಲ ಎಂದಾಗ 'ನೀವು ನಿಲ್ಲಬಹುದಲ್ಲ? ನಿಲ್ಲಿ ಸಾಹೇಬ್ರೇ. ಅಲ್ಲಿ ನಿಮ್ಮಂಥ ಮುಂದಾಳುಗಳು ಇನ್ಯಾರೂ ಇಲ್ಲ' ಎಂದರು. ನಾನೆಂದೆ - 'ಹೌದು, ನಿಲ್ಲಬಹುದು ಸ್ವಾಮಿ. ಆದರೆ ಹೇಗೆ ನಿಲ್ಲುವುದು? ಪಕ್ಷದ ಅಭ್ಯರ್ಥಿಯಾಗಲು ಅರ್ಜಿಹಾಕಬೇಕಿದ್ದರೆ 750 ರೂಪಾಯಿ ಕಟ್ಟಬೇಕು. ಅಷ್ಟು ಹಣ ನನ್ನಲ್ಲಿಲ್ಲ.' ನಾನಿನ್ನೂ ಬಾಯಿಮುಚ್ಚಿರಲಿಲ್ಲ, ರಾಯರು ತಮ್ಮ ಕಿಸೆಗೆ ಕೈಹಾಕಿದವರೇ 750 ರೂಪಾಯಿ ತೆಗೆದು ನನ್ನೆದುರು

ಇಟ್ಟರು! 'ನೀವು ಯಾವಾಗ ಬೇಕಾದರೂ ಕೊಡಿ' ಎಂಬ ಮಾತನ್ನೂ ಸೇರಿಸಿದರು. ಯಾರೂ ಸಹಾಯ ಮಾಡದ ಸಂದರ್ಭದಲ್ಲಿ ರಾಯರು ತೋರಿದ ಈ ಪ್ರೀತಿಯ ಘಟನೆ ನನ್ನ ಕಣ್ಣ ಮುಂದೆ ಇವತ್ತಿಗೂ ಕಾಣುತ್ತಿದೆ.

## ಮಹಾನುಭಾವ

1967ರಲ್ಲಿ ಪುನಃ ನಾನು ಸ್ಪರ್ಧಿಸಿ ಶಾಸಕನಾದೆ. ರಾಯರು ನನಗೆ ಬಹಳ ಪ್ರೋತ್ಸಾಹಿಸಿ ಬೆನ್ನುತಟ್ಟುತ್ತಿದ್ದರು. ಆಗ ನನ್ನನ್ನು ಅನೇಕರು ಸಾರ್ವಜನಿಕ ಸಭೆ ಸಮಾರಂಭಗಳಿಗೆ ಕರೆಯುತ್ತಿದ್ದರು. ಸಂಜೆ ನಾಲ್ಕೂವರೆ, ಐದಕ್ಕೇ ಹೋಗಬೇಕಾಗುತ್ತಿತ್ತು. ನಾನಾಗ ಸಂಘದ ಕ್ಯಾಶಿಯರ್. ಸೊಸೈಟಿಯ ಕೆಲಸ ಬಿಟ್ಟು ಹೋಗುವುದಾದರೂ ಹೇಗೆ? ಆದರೆ ಆ ಬಗ್ಗೆ ರಾಯರ ಬಳಿ ಪ್ರತಿಬಾರಿ ಪ್ರಸ್ತಾಪಿಸಿದಾಗಲೂ, 'ನೀವು ಹೋಗಿ, ನೀವು ಹೋಗಿ, ನಾನೆಲ್ಲ ನೋಡಿಕೊಳ್ಳೇನೆ' ಎಂದು ಕಳಿಸಿಕೊಡ್ತಿದ್ರು. ಇದು ನನ್ನ ಬೆಳವಣಿಗೆಗೆ ತುಂಬ ಸಹಕಾರಿಯಾಯ್ತು. ಇದನ್ನು ಮರೀಲಿಕ್ಕೆ ಸಾಧ್ಯವಿಲ್ಲ. ಇಂಥ ವ್ಯಕ್ತಿಗಳು ಈಗ ಸಿಗುವುದೇ ಕಷ್ಟ. ಅವರೊಬ್ಬ ವಿಶಾಲ ಮನಸ್ಸಿದ್ದಂತಹ ವ್ಯಕ್ತಿ. ಮಾನವತಾವಾದಿ. ಎಲ್ಲಕ್ಕಿಂತ ಮುಖ್ಯವಾಗಿ, ಸದಾ 'ಎಲ್ಲರಿಗೂ ಒಳ್ಳೆಯದಾಗಬೇಕು' ಎಂಬ ಆಶಯವನ್ನಿಟ್ಟುಕೊಂಡಿದ್ದ ಮಹಾನುಭಾವ.

ಲಕ್ಷ್ಮೀನಾರಾಯಣ ರಾಯರ ಹೆಸರಿನಲ್ಲಿ ಸಹಕಾರಿ ಪ್ರಶಸ್ತಿ ಸ್ಥಾಪಿಸುವುದು ಸೂಕ್ತ. ಮೂರು ದಶಕಗಳ ಕಾಲ ಅಡಿಕೆ ಸೊಸೈಟಿಯ ಮೂಲಕ ಸಹಕಾರಿ ರಂಗಕ್ಕೆ ಅವರು ಸಲ್ಲಿಸಿದ ಸೇವೆ ಅವಿಸ್ಮರಣೀಯ. ಅವರಿಗೆ ಹಣ ಮಾಡಬೇಕೆಂದಿದ್ದರೆ ಮಾಡಬಹುದಿತ್ತು; ಹುದ್ದೆ ಬೇಕೆಂದಿದ್ದರೆ ಬೇರೆಡೆಗೆ ಹೋಗಬಹುದಿತ್ತು. ಆದರೆ ಇವೆರಡರಿಂದಲೂ ದೂರವಿದ್ದು, ಸಂಘದಲ್ಲೇ ಅಹರ್ನಿಶಿ ದುಡಿದು ಅಡಿಕೆ ಬೆಳೆಗಾರರ ಒಿತಕ್ಕಾಗಿ ಪರಿಶ್ರಮಪಟ್ಟರು.





ಬಿ.ಎಂ. ಇದಿನಬ್ಬ
'ಕಾವ್ಯಶ್ರೀ'
ಮಾಸ್ತಿಕಟ್ಟೆ, ಉಳ್ಳಾಲ
ಮಂಗಳೂರು - 574 189

ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ವಿಧಾನ ಸೌಧ, ಬೆಂಗಳೂರು - 560 001






# ನಾ ಕಂಡ ಸಹಕಾರಿ ಪೈಲೂರು

• ಪೆರಾಜೆ ಶ್ರೀನಿವಾಸ ರಾವ್

ಸುಮಾರು ನಾಲ್ಕು ದಶಕಗಳಿಗೂ ಮೀರಿದ ಹಿಂದಿನ ವಿಚಾರ. ಸುಮಾರು 1940ರಿಂದ ಸಹಕಾರಿ ಚಳವಳಿಯ ಪಿತಾಮಹ ಮೊಳಹಳ್ಳಿ ಶಿವರಾಯರ ಅಪೇಕ್ಷೆಯಂತೆ ಆ ಕ್ಷೇತ್ರದಲ್ಲಿ ಸೇವೆಮಾಡಲು ನನಗೂ ಅವಕಾಶ ಸಿಕ್ಕಿತ್ತು.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಕೃಷಿಕರ ಉತ್ಪತ್ತಿಗಳನ್ನು ವ್ಯವಸ್ಥಿತವಾಗಿ ಮಾರಾಟ ಮಾಡುವ ಉದ್ದೇಶದಿಂದ ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘ ಎಂಬ ಸಹಕಾರಿ ಸಂಸ್ಥೆ ಮಂಗಳೂರಿನಲ್ಲಿ ತನ್ನ ಮುಖ್ಯ ಆಫೀಸನ್ನು ಹೊಂದಿ ವ್ಯವಹಾರ ನಡೆಸುತ್ತಲಿತ್ತು. ಅದರ ಕಾರ್ಯದರ್ಶಿಯಾಗಿ ಪೈಲೂರು ಲಕ್ಷ್ಮೀನಾರಾಯಣ ರಾಯರು ಸೇವೆ ಸಲ್ಲಿಸುತ್ತಿದ್ದರು. ಆ ಸಂದರ್ಭದಲ್ಲಿ ಓರ್ವ ಕೃಷಿಕನಾಗಿ ಹಾಗೂ ಸಹಕಾರಿ ಕ್ಷೇತ್ರದಲ್ಲಿ (ಗ್ರಾಮೀಣ ಸಹಕಾರಿ ಸಂಘದಲ್ಲಿ) ಸೇವೆಮಾಡುತ್ತಿರುವವನಾಗಿ ನನಗೆ 'ಶ್ರೀಯುತ ಪೈಲೂರು' ಎಂತಲೇ ಕರೆಯಲ್ಪಡುತ್ತಿದ್ದ ಲಕ್ಷ್ಮೀನಾರಾಯಣ ರಾಯರ ಪರಿಚಯವಾಯಿತು.

ಸದಾ ಹಸನ್ಮುಖಿಯಾಗಿಯೇ ಇರುತ್ತಿದ್ದು, ನೂರಾರು ಗ್ರಾಹಕರೊಡನೆ ದೈನಂದಿನ ವ್ಯವಹಾರಗಳನ್ನು ನಡೆಸುತ್ತಿದ್ದ ಅವರ ನಿಷ್ಠೆ, ಪ್ರಾಮಾಣಿಕತೆ ಮತ್ತು ಕರ್ತವ್ಯ ಬದ್ಧತೆ ಪ್ರಶಂಸೆಗೆ ಒಳಗಾಗಿತ್ತು. ಎಲ್ಲರೂ ಮೆಚ್ಚಿದ ವಿಶೇಷವಾದ ವ್ಯಕ್ತಿತ್ವ ಅವರದು. ಕೃಷಿಕರ ಉತ್ಪನ್ನಗಳನ್ನು ತನ್ನ ಸ್ವಂತ ಉತ್ಪನ್ನವೆಂಬಂತೆಯೇ ಬಹಳ ಶ್ರದ್ಧೆ ಹಾಗೂ ಆಸಕ್ತಿಯಿಂದ ಸಂಘದಲ್ಲಿ ಜೋಪಾನ ಮಾಡಿ ರಕ್ಷಿಸಿ ಉತ್ತಮ ಬೆಲೆಗೆ ಮಾರಾಟಮಾಡುವ ಅವರ ಕರ್ತವ್ಯಪ್ರಜ್ಞೆ ಅಸಾಧಾರಣವಾಗಿತ್ತು. ಸದಸ್ಯರ ಉತ್ಪನ್ನಗಳನ್ನು ಯೋಗ್ಯಬೆಲೆಗೆ ಮಾರಾಟದ ವ್ಯವಸ್ಥೆ ಮಾತ್ರವಲ್ಲ, ಹಳ್ಳಿ ಪ್ರದೇಶದಲ್ಲಿರುತ್ತಿದ್ದ ಸಾವಿರಾರು ಕೃಷಿಕ ಸದಸ್ಯರಿಗೆ ಗೃಹಬಳಕೆಗೆ ಅಗತ್ಯವಾದ ವಸ್ತುಗಳನ್ನು ಬಂದರಿನಲ್ಲಿ ಸಗಟು ಮಾರಾಟಗಾರರಿಂದ ಖರೀದಿಸಿ, ಸದಸ್ಯರ ಮನೆಗಳಿಗೆ ಕ್ಲಪ್ತ ಸಮಯಕ್ಕೆ ಸಂಘದ ಲಾರಿಗಳ ಮೂಲಕ ಕಳುಹಿಸುವಲ್ಲಿಯೂ ಅವರ ಪಾತ್ರ ಸ್ಮರಣೀಯ.

**ಕರ್ಮಯೋಗಿ**

ಸಂಘದ ಒಂದು ವಾರ್ಷಿಕ ಮಹಾಸಭೆಯಲ್ಲಿ ನೆರೆದಿದ್ದ ಸದಸ್ಯರಲ್ಲಿ ಒಬ್ಬರು ಲಕ್ಷ್ಮೀನಾರಾಯಣ ರಾಯರ ಸೇವೆಯನ್ನು ಗುರುತಿಸುತ್ತಾ ಹೇಳಿದ ಸ್ವಾರಸ್ಯವಾದ ಒಂದು ಮಾತು ಇಂದಿಗೂ ನೆನಪಿದೆ. ಅವರೆಂದರು: 'ನಮ್ಮ ಕಾರ್ಯದರ್ಶಿಯವರು ನಮ್ಮ ಉತ್ಪತ್ತಿಗಳನ್ನು ಯೋಗ್ಯ ಬೆಲೆಗೆ ಮಾರಾಟಮಾಡುವುದಲ್ಲದೆ, ಬೆಕ್ಕಿನ ಮರಿಯಿಂದ ಹಿಡಿದು ಬೆಲ್ಲ, ಸಕ್ಕರೆ ಇತ್ಯಾದಿ ನಮ್ಮ ಗೃಹಬಳಕೆಯ ಅಗತ್ಯಗಳನ್ನು ಒಂದು ಕಾರ್ಡಿನಲ್ಲಿ ಬರೆದು ತಿಳಿಸಿದರೆ ಸಂಕೋಚವಿಲ್ಲದೆ ನಮಗೆ ಒದಗಿಸುತ್ತಾರೆ. ಅದ್ರಿಂದ ನಮ್ಮ ಸಮಸ್ಯೆಗಳೆಲ್ಲಾ ಪರಿಹಾರವಾಗುತ್ತಲಿವೆ.' ಸದಾ ನನ್ನ ನೆನಪಿನಲ್ಲಿ ಉಳಿಯುವ ಮಾತಿದು. ರಾಯರಿಗೆ ಕೋಪ ಬಂದಿರುವ ಸಂದರ್ಭ ನೋಡುವುದೇ ಅಪರೂಪ. ಅವರು ಸಮಾಜ ಸೇವೆಗೆ ತನ್ನನ್ನು ಪೂರ್ತಿ ಅರ್ಪಿಸಿಕೊಂಡು ಸಹಕಾರ ಕ್ಷೇತ್ರದಲ್ಲಿ 'ನಿಜ ಸಹಕಾರಿ'ಯಾಗಿ ಸೇವೆ ಸಲ್ಲಿಸುತ್ತಿದ್ದ 'ನಿಜ ಕರ್ಮಯೋಗಿ'ಯೇ ಆಗಿದ್ದರು. ಇಂತಹವರ ಉತ್ತಮ ಮಾರ್ಗದರ್ಶನದಲ್ಲಿ ಸಂಘದ ವ್ಯವಹಾರ ಅಭಿವೃದ್ಧಿ ಹೊಂದಿರುವುದು ಸಹಜವಾಗಿದೆ.

ಜೇನುನೊಣಗಳು ಸಹಕಾರದ ನೆಲೆಯಲ್ಲಿ ಕಾರ್ಯನಡೆಸುತ್ತವೆ. ಸಹಕಾರದ ಹೃದಯವಂತಿಕೆಯ ಪೈಲೂರು ಅವರಿಗೆ ಜೇನುಸಾಕಣೆಯಲ್ಲಿ ಅತೀವ ಆಸಕ್ತಿ. ಅದರ ಅಭಿವೃದ್ಧಿಗೆ ಅವರ ಕೊಡುಗೆ ಅಪಾರ. ಜೇನು ಸಹಕಾರಿ ಸಂಘದ ಸ್ಥಾಪನೆಗೂ ಅವರು ಕಾರಣರಾದರು.

ಲಕ್ಷ್ಮೀನಾರಾಯಣ ರಾಯರು ಸಹಕಾರಿ ಕ್ಷೇತ್ರದ ಸೇವೆಯಿಂದ ನಿವೃತ್ತರಾದ ನಂತರವೂ ಹಲವು ರೀತಿಯಲ್ಲಿ ಸಂಶೋಧನೆಗಳಲ್ಲಿ ನಿರತರಾಗಿದ್ದು ವಿವಿಧ ಬಣ್ಣಗಳ ಮತ್ಸ್ಯಗಳನ್ನು ಸಾಕುವ ಹವ್ಯಾಸದಲ್ಲಿ ತೊಡಗಿದ್ದರು. ತನ್ನ ನಿವೃತ್ತಿಜೀವನದಲ್ಲಿಯೂ ಸದಾ ಹಸನ್ಮುಖಿಗಳಾಗಿದ್ದರು. ಸಂಜೆಯ ವೇಳೆ ಹಾಗೂ ವಿವಿಧ ಕಾರ್ಯಕ್ರಮಗಳಲ್ಲಿ ಅನೇಕ ಬಾರಿ ಅವರನ್ನು ಭೇಟಿಯಾಗುತ್ತಿದ್ದಾಗ ಆತ್ಮೀಯತೆಯಿಂದ ಕುಶಲೋಪರಿಗಳನ್ನು ಮಾತನಾಡುತ್ತ ಅವರು ನನ್ನ ಮೇಲೆ ಇಟ್ಟುಕೊಂಡಿದ್ದ ಪ್ರೀತಿ, ವಿಶ್ವಾಸವನ್ನು ಸದಾ ಸ್ಮರಿಸುವಂತಾಗಿದೆ. ಮತ್ಸ್ಯಗಳ ಕುರಿತು ತಾನು ಬರೆದ ಪುಸ್ತಕದ ಪ್ರತಿಯನ್ನೂ ಅವರು ನನಗೆ ನೀಡಿದ್ದಾರೆ.

**ಅಪೂರ್ವ ಸಹಕಾರಿ**

ತನ್ನ ವೈಯಕ್ತಿಕ ಸ್ವಾರ್ಥಕ್ಕಾಗಿ ಅವರಲ್ಲಿ ಯಾವ ರೀತಿಯ ಆಗ್ರಹ ಅಥವಾ ಹಂಬಲವನ್ನು ಕಾಣುತ್ತಿರಲಿಲ್ಲ. ಇದುವೇ ಅವರಲ್ಲಿರುತ್ತಿದ್ದ 'ಸಹಕಾರ'ದ ಮಹತ್ವವಾಗಿದೆ. ಹೀಗೆ ಸಮಾಜಕ್ಕಾಗಿ ಸಹಕಾರಿಯಾಗಿ ತನ್ನನ್ನೇ ಅರ್ಪಿಸಿಕೊಂಡು ಸೇವೆಮಾಡಿದ ಸಹಕಾರಿ ಪೈಲೂರು ಅವರು, ಸದಾ ಸ್ಮರಣೀಯರು. ಅವರ ಶ್ರದ್ಧಾಪೂರ್ವಕವಾದ ಸೇವೆ ಎಲ್ಲರಿಗೂ ಆದರ್ಶ. ನಾ ಕಂಡ ಅಪೂರ್ವ ಸಹಕಾರಿಗೆ ನನ್ನ ಶ್ರದ್ಧಾಂಜಲಿಗಳು.

◆



**ಪೆರಾಜೆ ಶ್ರೀನಿವಾಸ ರಾವ್**
**ಅಂಚೆ : ಬುಡೋಳಿ - 574 253**
**ದಕ್ಷಿಣ ಕನ್ನಡ**



# ಸವ್ಯಸಾಚಿಯ ನೆನಪು

▪ ಬಲನಾಡು ಸುಬ್ಬಣ್ಣ ಭಟ್ಟ

ಮಂಗಳೂರಿನ ಹಳೆಬಂದರಿನ ಮೂಲೆಯಲ್ಲೊಂದು ಹಳೆಯ ಕಟ್ಟಡ. ಅದರ ಹೊರಬದಿಯಲ್ಲೊಂದು ಕಿರುಕೋಣೆ. ಅಲ್ಲಿ ಹಳೆಯ ಕಾಲದ ಒಂದು ಮೇಜು ಮತ್ತು ಕುರ್ಚಿ. ಬಂದವರಿಗೆ ಆಸೀನರಾಗಲು ಒಂದೆರಡು ಕುರ್ಚಿ ಬೆಂಚುಗಳು. ಅಲ್ಲೊಬ್ಬ ಶುಭ್ರ ಖಾದಿಜುಬ್ಬಾ ತೊಟ್ಟು, ಬಂದವರೊಡನೆ ಮಾತನಾಡುತ್ತಾ ಒಂದು ಕೈಯಲ್ಲಿ ಯಾದಾಸ್ತು ಪಟ್ಟಿಗಳಿಗೆ ಸಹಿಮಾಡುತ್ತಾ ಇನ್ನೊಂದು ಕೈಯಲ್ಲಿ ಆಫೀಸು ಜವಾನರಿಗೆ ಸೂಚನೆ

ಕೊಡುತ್ತಿರುವ ಸವ್ಯಸಾಚಿ ಮಹನೀಯ. ಸುಮಾರು 52 ವರ್ಷಗಳ ಹಿಂದೆ, ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘದ ಸಾರಥ್ಯವನ್ನು ವಹಿಸಿಕೊಂಡಿದ್ದ ಲಕ್ಷ್ಮೀನಾರಾಯಣ ರಾಯರನ್ನು ನಾನು ಮೊದಲು ಕಂಡದ್ದು ಹೀಗೆ.

ಪಾದರಸದಂತೆ ಚುರುಕಾದ, ಸ್ಫಟಿಕದಂತೆ ಪಾರದರ್ಶಕವಾದ ಸರಳಜೀವಿ ಪೈಲೂರರು. ಅಂದಿನ ಕಷ್ಟದ ದಿನಗಳಲ್ಲಿ ಸಂಸ್ಥೆಯನ್ನು ಮುನ್ನಡೆಸಿ ಉನ್ನತ ಮಟ್ಟಕ್ಕೇರಿಸಿ ನಿವೃತ್ತರಾದ ಮಹನೀಯರು. ಬೈಂದೂರು ಪ್ರಭಾಕರ ರಾಯರು ಅಧ್ಯಕ್ಷ, ಮೊಳಹಳ್ಳಿ ಶಿವರಾಯರು ಉಪಾಧ್ಯಕ್ಷ, ಪೈಲೂರರು ಕಾರ್ಯದರ್ಶಿ, ಕೈಂತಜೆ ವೆಂಕಟ್ರಮಣ ಭಟ್ಟರು ಜತೆ ಕಾರ್ಯದರ್ಶಿಯಾಗಿದ್ದ ಆ ಕಾಲ ಸಂಸ್ಥೆಯ ಸ್ವರ್ಣಯುಗವಾಗಿತ್ತು. ಎರಡನೇ ಮಹಾಯುದ್ಧದ ಫಲಶ್ರುತಿಯಾಗಿ ಕುಸಿದ ಆರ್ಥಿಕತೆಯ ಹಿನ್ನೆಲೆಯಲ್ಲಿ ಅಡಿಕೆ ಬೆಳೆಗಾರರ ಅಭ್ಯುದಯಕ್ಕಾಗಿ ಜಿಲ್ಲೆಯ ಹಲವಾರು ಕಡೆ ಶಾಖೆಗಳನ್ನು ತೆರೆದು, ಅಹರ್ನಿಶಿ ದುಡಿದು, ಅಡಿಕೆ ಬೆಳೆಗಾರರ ಹಿತಚಿಂತಕ ಮಿತ್ರರಾಗಿದ್ದ ಪೈಲೂರರನ್ನು ಅರಿಯದ ಅಡಿಕೆ ಬೆಳೆಗಾರರೇ ಇರಲಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು.

**ಪೈಲೂರರ ಸೊಸೈಟಿ!**

ಅಡಿಕೆ ಬೆಳೆಗಾರರಿಗೆ ಒಳ್ಳೆಯ ಸಲಹೆಗಾರರಾಗಿದ್ದ ರಾಯರ ಕಾಲದಲ್ಲಿ ಸಂಸ್ಥೆಯು ಉಚ್ಛ್ರಾಯ ಸ್ಥಿತಿಗೆ ಏರಿ, ಕೇಂದ್ರ ಮೈದಾನದ ಪಶ್ಚಿಮ ಬದಿಯಲ್ಲಿ ಸಾಕಷ್ಟು ವಿಸ್ತಾರವಾದ ಸ್ವಂತ ನಿವೇಶನವನ್ನು ಹೊಂದಿ, ವ್ಯವಹಾರಕ್ಕೆ ದೊಡ್ಡ ಕಟ್ಟಡಗಳನ್ನು ನಿರ್ಮಿಸಿ, ದಕ್ಷಿಣ ಭಾರತದಲ್ಲಿ ಉತ್ತಮ ಸಹಕಾರಿ ಮಾರಾಟ ಸಂಘವೆಂಬ ಮಾನ್ಯತೆಯನ್ನು ಪಡೆದಿರುವುದು ಸ್ವರ್ಣಾಕ್ಷರಗಳಿಂದ ದಾಖಲಿಸಬೇಕಾದ ಸಂಗತಿ. ಸಂಸ್ಥೆಯು ಹಳ್ಳಿಹಳ್ಳಿಗಳಲ್ಲಿ ಪೈಲೂರರ ಸೊಸೈಟಿಯೆಂದೇ ಕರೆಸಿಕೊಂಡಿತ್ತು.

ಬೆಳೆಗಾರರಿಗೆ ಮಿತ್ರನಾಗಿದ್ದ ರಾಯರು ಅಡಿಕೆ ಖರೀದಿಸುವ 'ಸೇಟು'ಗಳಿಗೂ ಆಪ್ತರಾಗಿದ್ದರು. ಸೊಸೈಟಿಯ ನೌಕರರನ್ನು ತಮ್ಮ ಮನೆಮಂದಿಯಂತೆಯೇ ಕಾಣುತ್ತಿದ್ದ ರಾಯರು ಸ್ನೇಹಜೀವಿ. ಹೊಗಳಿಕೆಯನ್ನು ಎಂದೂ ಸಹಿಸದ ರಾಯರು, ಎಲ್ಲದರಲ್ಲೂ ಒಳ್ಳೆಯದನ್ನೇ ಕಾಣುವ ಮಹಾನುಭಾವ. ಇತರರಿಗೆ ತನ್ನಿಂದ ಸಾಧ್ಯವಾಗುವ ಯಾವುದೇ ಉಪಕಾರವನ್ನು ಮಾಡಿ ಧನ್ಯತೆಯನ್ನು ಕಾಣುತ್ತಿದ್ದ ಅವರದು ಉದಾರ ಚರಿತ.

ಸೊಸೈಟಿಯ ನೌಕರರನ್ನು ತಮ್ಮ ಮನೆಮಂದಿಯಂತೆಯೇ ಕಾಣುತ್ತಿದ್ದ ರಾಯರು ಸ್ನೇಹಜೀವಿ. ಯಾರೇ ಅವರ ಆಫೀಸಿಗೆ ಬರಲಿ, ಅವರಿಗೆ ಕಾಫಿ, ಚಹಾ ಸತ್ಕಾರ ಮಾಡಿ, ಕಷ್ಟ, ಸುಖಗಳಲ್ಲಿ ಭಾಗಿಯಾಗುತ್ತಿದ್ದರು. ಮಧ್ಯಾಹ್ನ ಆಫೀಸು ಮುಗಿವ ವೇಳೆ ಅಲ್ಲಿ ಯಾರೇ ಇರಲಿ, ಅವರನ್ನು ತಮ್ಮ ವಾಹನದಲ್ಲಿ ಮನೆಗೆ ಕರೆದೊಯ್ದು ಸ್ವಾದಿಷ್ಟ ಭೋಜನದಿಂದ ಸತ್ಕರಿಸುತ್ತಿದ್ದರು. ಮನೆಗೆ ಬರಲು ಮುಜುಗರಪಟ್ಟರೆ ರಾಯರಿಗೆ ಕೂಡಲೇ ಸಿಟ್ಟುಬರುತ್ತಿತ್ತು. ಹಲವು ಬಾರಿ ಅವರ ಮನೆಯಲ್ಲಿ ಉಂಡ ಅನುಭವ ನೌಕರನಾಗಿದ್ದ ನನಗಿದೆ.

ಬೆಳೆಗಾರರಿಗೆ ಮಿತ್ರನಾಗಿದ್ದ ರಾಯರು ಅಡಿಕೆ ಖರೀದಿಸುವ 'ಸೇಟು'ಗಳಿಗೂ ಆಪ್ತರಾಗಿದ್ದರು. ವ್ಯಾಪಾರದಲ್ಲಿ ಅವರ ಕೈಚಳಕ ಅದ್ವಿತೀಯ. ಸದಾ ಹಸನ್ಮುಖಿಯಾಗಿರುತ್ತಿದ್ದ ರಾಯರ ಹವ್ಯಾಸಗಳು ಹಲವಾರು. ದಕ್ಷಿಣ ಕನ್ನಡದಲ್ಲಿ ಶಾಸ್ತ್ರೀಯವಾದ ಜೇನುಕೃಷಿಯ ಆದ್ಯ ಪ್ರವರ್ತಕರಲ್ಲಿ ಒಬ್ಬರಾಗಿದ್ದು, ಈ ಕುರಿತು ಗ್ರಂಥವನ್ನೂ ಬರೆದಿದ್ದರು. ಜೇನುಸೊಸೈಟಿಯ ಅಭ್ಯುದಯಕ್ಕೂ ಸಾಕಷ್ಟು ದುಡಿದವರು. ಅಲಂಕಾರಿಕ ಮತ್ಸ್ಯಸಾಕಣೆ ಹಾಗೂ ಬೆಕ್ಕುಗಳ ಸಾಕಣೆಯೂ ಅವರಿಗೆ ಪ್ರಿಯವಾಗಿತ್ತು.

ಬಾಳಿನ ಉತ್ತರಾರ್ಧದಲ್ಲಿ ಭಗವಾನ್ ಶ್ರೀ ಸತ್ಯಸಾಯಿ ಬಾಬಾರವರಿಂದ ಆಕರ್ಷಿತರಾಗಿ ಅವರ ಅನನ್ಯ ಭಕ್ತರಾಗಿದ್ದ ಪೈಲೂರರು, ಹಲವಾರು ಕಡೆಗಳಲ್ಲಿ ತಮ್ಮ ಸ್ವಂತ ಖರ್ಚಿನಿಂದ ಭಗವಾನರ ಕುರಿತ ಚಲನಚಿತ್ರಗಳನ್ನು ಪ್ರದರ್ಶಿಸುತ್ತಿದ್ದರು. ಮಂಗಳೂರಿನ ಶ್ರೀ ಸತ್ಯಸಾಯಿ ಸೇವಾ ಸಮಿತಿಯ ಆಧಾರಸ್ತಂಭಗಳಲ್ಲೊಂದಾಗಿದ್ದು, ತನ್ನ ನಿವಾಸದಲ್ಲೂ ಆಗಾಗ ನಾಮಸಂಕೀರ್ತನೆಗಳನ್ನೂ, ಭಜನೆಗಳನ್ನೂ ಏರ್ಪಡಿಸುತ್ತಿದ್ದ ಆಸ್ತಿಕ

ಮಹಾನುಭಾವರಿವರು. ಹಲವಾರು ಮಂದಿ ಬಂಧುಮಿತ್ರರನ್ನು ತನ್ನ ಕಾರಿನಲ್ಲಿ ಪುಟ್ಟಪರ್ತಿಗೆ ಕರೆದೊಯ್ದು ಬಾಬಾರವರ ದರ್ಶನ ಮಾಡಿಸುತ್ತಿದ್ದ ರಾಯರಿಗೆ, ಯಾರಾದರೂ ಅಪ್ಪಿತಪ್ಪಿ ಪ್ರತಿಫಲದ ವಿಷಯ ಮಾತನಾಡಿದರೆ ಕೂಡಲೇ ಸಿಟ್ಟುಬರುತ್ತಿತ್ತು.

**ಉದಾರ ಚರಿತ**

ಹೊಗಳಿಕೆಯನ್ನು ಎಂದೂ ಸಹಿಸದ ರಾಯರು, ಎಲ್ಲದರಲ್ಲೂ ಒಳ್ಳೆಯದನ್ನೇ ಕಾಣುವ ಮಹಾನುಭಾವ. ಊರಿನಿಂದ ಬಂದವರಿಗೆ ಮಂಗಳೂರಲ್ಲಿ ಪೈಲೂರರ ಮನೆಯೇ ಅತಿಥಿಗೃಹವಾಗಿತ್ತು. ಇತರರಿಗೆ ತನ್ನಿಂದ ಸಾಧ್ಯವಾಗುವ ಯಾವುದೇ ಉಪಕಾರವನ್ನು ಮಾಡಿ ಧನ್ಯತೆಯನ್ನು ಕಾಣುತ್ತಿದ್ದ ಅವರದು ಉದಾರ ಚರಿತ.

ಉಪನಯನವಿರಲಿ, ಮದುವೆಯಿರಲಿ, ಪೂಜೆಯಿರಲಿ, ಉತ್ತರಕ್ರಿಯೆಯಿರಲಿ ಎಲ್ಲಾ ಕಡೆಯೂ ಅವರದು ಒಂದೇ ತೆರನಾದ ಉಡುಗೆ. ಬಣ್ಣ ಬದಲಿಸುವ ಸ್ವಭಾವ ಅವರಲ್ಲಿರಲಿಲ್ಲ. ರಾಯರಿಗೆ ಒಮ್ಮೊಮ್ಮೆ ಕೋಪ ಬರುವುದಿತ್ತು. ಅದು ಕ್ಷಣಮಾತ್ರದಲ್ಲಿ ಮಾಯವಾಗುವ ಇಂದ್ರಚಾಪವಾಗಿತ್ತು.

ಹಲವಾರು ಕ್ಷೇತ್ರಗಳಲ್ಲಿ ಸುಪರಿಚಿತರಾಗಿದ್ದ ಲಕ್ಷ್ಮೀನಾರಾಯಣರದ್ದು ಸ್ವಾಭಿಮಾನದ ಬದುಕು. ಪತಿಯ ಯಾವುದೇ ಕಾರ್ಯದಲ್ಲಿ ಸದಾನುಕೂಲೆಯಾದ ಪತ್ನಿ ಶ್ರೀಮತಿ ಪರಮೇಶ್ವರಿ ಅಮ್ಮನವರ ಪ್ರೋತ್ಸಾಹವೂ ಅವರಿಗಿತ್ತು. ಬಾಳಿನಲ್ಲಿ ಹಲವು ದುಃಖದ, ಕಷ್ಟದ ಸಂದರ್ಭಗಳು ಒದಗಿಬಂದರೂ ವಿಚಲಿತರಾಗದೆ, ಕಷ್ಟ-ಸುಖವನ್ನು ಸಮಾನವಾಗಿ ಕಂಡ ಸ್ಥಿತಪ್ರಜ್ಞರು ಅವರಾಗಿದ್ದರು.

ಯಾರಿಂದಲೂ ಯಾವುದನ್ನೂ ಬಯಸದ ಪೈಲೂರು ಲಕ್ಷ್ಮೀನಾರಾಯಣ ರಾಯರು ತಾನು ಸವೆದು ಪರರಿಗೆ ಪರಿಮಳವನ್ನು ಹಂಚಿದ ಶ್ರೀಗಂಧದ ಕೊರಡಿನಂತೆ ಬದುಕಿದರು. ಅವರ ನೆನಪು ಸದಾ ಹಸಿರಾಗಿದೆ.





**ಬಲನಾಡು ಸುಬ್ಬಣ್ಣ ಭಟ್ಟ**
'ಪಂಚವಟಿ'
ಅಂಚೆ : ನರಿಮೊಗರು
ಪುತ್ತೂರು - 574 312
ದಕ್ಷಿಣ ಕನ್ನಡ

ಪೈಲೂರು ಮನೆತನಕೆ ನೀವೊಂದು ಹೆಸರು
ನಿಮ್ಮ ನೆನಪಿಂದು ತಾನಿಹುದಲ್ಲಿ ಹಸಿರು
ನಿಮ್ಮ ಒಡನಾಟದನುಭವವು ಸವಿ ನಮಗೆ
ನಮನವಿದು ಲಕ್ಷ್ಮೀನಾರಾಯಣರೆ ನಿಮಗೆ

- ಎಸ್.ಬಿ. ಹೇಟ್, ಬಲನಾಡು



# ‘ಸತ್ಯನಾರಾಯಣ, ನಮಗೆ ಕಾಫಿ ಕುಡಿಸುತ್ತೀಯೋ?’

• ಸತ್ಯನಾರಾಯಣ ಪೋನಡ್ಕ

ಅಜ್ಜನೊಂದಿಗೆ 1975ರಿಂದ 1987ರ ತನಕ ಕೆಲಸ ಮಾಡಿದ್ದೇನೆ. ಅವರ ಕೈಕೆಳಗೆ ಕೆಲಸ ಮಾಡಿದ ಬಗ್ಗೆ ನನಗೆ ಹೆಮ್ಮೆ ಇದೆ. ಮಾತ್ರವಲ್ಲ ಅವರಲ್ಲಿ ಅಪಾರ ಗೌರವವೂ ಇದೆ.

ಅಜ್ಜನೊಂದಿಗೆ ಕೆಲಸ ಮಾಡುತ್ತಿದ್ದ ನನ್ನನ್ನು ಅವರು ಯಾವತ್ತೂ ಒಬ್ಬ ಕೆಲಸದವ ಎಂಬಂತೆ ಕಾಣಲಿಲ್ಲ. ಅವರ ಗೆಳೆಯರು, ಗಣ್ಯ ವ್ಯಕ್ತಿಗಳು ಆಫೀಸಿಗೆ ಬರುತ್ತಿದ್ದರು. ಆಗ ಅವರು ನನ್ನನ್ನು ತಮ್ಮ ಗೆಳೆಯ ಅಥವಾ ಸಂಬಂಧಿ ಎಂದೇ ಪರಿಚಯಿಸುತ್ತಿದ್ದರು. ಭಂಡಸಾಲೆಗೆ ಸಂಬಂಧಿಕರು ಅಥವಾ ಇತರ ಗೆಳೆಯರು, ಅತಿಥಿಗಳು ಬಂದಾಗಲೆಲ್ಲಾ ಕಾಫಿ ತರಿಸಿಕೊಡುವ ಕ್ರಮ ಸಾಮಾನ್ಯವಾಗಿತ್ತು. ಆಗ ಅಟೆಂಡರ್ ಇಲ್ಲದಿದ್ದ ಸಮಯದಲ್ಲಿ ಅಜ್ಜ ನನ್ನಲ್ಲಿ ಹೀಗೆ ಹೇಳುತ್ತಿದ್ದರು: ‘ಸತ್ಯನಾರಾಯಣ, ನಮಗೆ ಕಾಫಿ ಕುಡಿಸುತ್ತೀಯೋ?’ ಇಂತಹ ಮಾತುಗಳಿಂದ ಯಾರಿಗೇ ಆದರೂ ಕೆಲಸ ಮಾಡಲು ಹುಮ್ಮಸ್ಸು ಬರುವುದೇ ಹೊರತು ಅತಿಥಿಗಳು ಬಂದು ತೊಂದರೆಯಾಯಿತು ಎಂದು ಖಂಡಿತ ಅನ್ನಿಸುವುದಿಲ್ಲ. ನನ್ನ ಸಂಬಂಧಿಕರು, ಗೆಳೆಯರು ನಾನಿಲ್ಲದ ಸಂದರ್ಭದಲ್ಲಿ ಭಂಡಸಾಲೆ ಅಥವಾ ಮನೆಗೆ ಬಂದಲ್ಲಿ ಅಜ್ಜ ಅವರನ್ನು ಸತ್ಕರಿಸಿಯೇ ಕಳುಹಿಸುತ್ತಿದ್ದರು.

ಆಗ ಕೂಲಿಯವರಿಗೆ ಒಪ್ಪಂದದ ಮೇಲೆ ಕೆಲಸ. ಅಂದರೆ ಕೆಲಸ ಇದ್ದರೆ ಮಾತ್ರ ಸಂಬಳ. ಅಡಿಕೆ ಮಾಲು ಬಂದಲ್ಲಿ ಮಾತ್ರ ಅವರಿಗೆ ಕೆಲಸ, ಕೂಲಿ ಎರಡೂ. ಆದರೆ ಅವರು ಕೆಲಸವಿಲ್ಲದೆ ಸುಮ್ಮನೆ ಕುಳಿತಿರುತ್ತಿದ್ದ ಸಂದರ್ಭಗಳಲ್ಲಿ ಅಜ್ಜ ಅವರಿಗೆ ದಾನದ ರೂಪದಲ್ಲಿ ಹಣ ಕೊಡುತ್ತಿದ್ದರು. ಭಿಕ್ಷುಕರು ಬಂದಾಗಲೂ ಅವರ ನಿರೀಕ್ಷೆಗಿಂತ ಹೆಚ್ಚು ಹಣಕೊಟ್ಟು ಕಳುಹಿಸುತ್ತಿದ್ದರು. ನೌಕರರ, ಕೂಲಿಯವರ, ಸಂಬಂಧಿಕರ ಅಥವಾ ಇತರರ ತಾಪತ್ರಯಗಳನ್ನು ತನ್ನ ತೊಂದರೆಯೆಂದೇ ಪರಿಗಣಿಸಿ, ಆರ್ಥಿಕ ನೆರವು ಕಲ್ಪಿಸಿದ ಪ್ರಸಂಗಗಳು ಅನೇಕ. ಹೀಗೆ ನೆರವು ಪಡೆದವರು ಅವರಾಗಿಯೇ ಹಿಂದಿರುಗಿಸಿದರೆ ತೆಗೆದುಕೊಳ್ಳುತ್ತಿದ್ದರು. ಅವರಾಗಿಯೇ ಯಾರಲ್ಲೂ ಹಣ ಹಿಂದಿರುಗಿಸಿ ಅಂತ ಕೇಳುತ್ತಿರಲಿಲ್ಲ. ಅಜ್ಜನ ನೆನಪಿನ ಶಕ್ತಿಯೂ ಅಗಾಧ.

### ಮರುಟಪಾಲಿಗೆ ಉತ್ತರ

ಯಾರದ್ದೇ ಕಾಗದ ಬರಲಿ, ಮರುಟಪಾಲಿಗೆ ಉತ್ತರಿಸುವುದು ಅಜ್ಜನ ಕ್ರಮ. ಹಾಗೆಯೇ ಯಾರದೇ ಫೋನ್ ಬರಲಿ, ಅಜ್ಜ ಆ ಬಗ್ಗೆ ಕೂಡಲೇ ಕ್ರಮ ತೆಗೆದುಕೊಳ್ಳುತ್ತಿದ್ದರು. ಒಂದು ವೇಳೆ ಮರುಟಪಾಲಿಗೆ ಉತ್ತರ ಬರೆಯಲು ಅಜ್ಜ ಇಲ್ಲದಿರುತ್ತಿದ್ದ ವೇಳೆಯಲ್ಲಿ ನಾವಾದರೂ ಉತ್ತರಿಸಲೇಬೇಕಿತ್ತು. ಅವರ ಸ್ಥಾನದಲ್ಲಿ ನಾವು, ಅವರಾದರೆ ಏನು ಕ್ರಮಕೈಗೊಳ್ಳುತ್ತಿದ್ದರು ಎಂದು ಯೋಚಿಸಿ ಅದರಂತೆ ಮುಂದವರಿಯಬೇಕಾಗಿತ್ತು. ಇದು ಅವರು ಕೊಟ್ಟ ಮಾರ್ಗದರ್ಶನ ಹಾಗೂ ಆದೇಶವೂ ಆಗಿತ್ತು!

ಅಜ್ಜ ಅನೇಕ ಸಲ ವಿದೇಶಕ್ಕೆ, ಪುಟ್ಟಪರ್ತಿಗೆ ಹೋಗುತ್ತಿದ್ದ ಸಂದರ್ಭದಲ್ಲಿ ಬ್ಯಾಂಕಿನಿಂದ ಹಣ ತೆಗೆಯಲು ನಮಗೆ ಅಧಿಕಾರ ಕೊಡುತ್ತಿದ್ದರು. ಅಜ್ಜ ಎಲ್ಲಿಯವರೆಗೆ ವಿಶ್ವಾಸ ಇಡುತ್ತಿದ್ದರು ಎಂದರೆ ಅವರಿಂದ ಏನಾದರೂ ಪತ್ರ ಬೇಕಾಗಿದ್ದಲ್ಲಿ 'ನೀನು ಇನ್ನೊಮ್ಮೆ ಬಂದು ಹೋಗುವುದು ಬೇಡ' ಎಂದು ಹೇಳಿ ಖಾಲಿ ಕಾಗದಕ್ಕೆ ಸಹಿಹಾಕಿ ಕೊಡುತ್ತಿದ್ದರು!



ನಾಳೆ ಮಾಡುವ ಎಂಬ ಮಾತು ಅಜ್ಜನಲ್ಲಿ ಹೇಳಲೇ ಬಾರದು. ಹೇಳಿದರೆ ಅಜ್ಜನಿಗೆ ಕೋಪ ಬಾರದೆ ಇರುತ್ತಿರಲಿಲ್ಲ. ಒಂದು ವೇಳೆ ಅಜ್ಜನ ಪರವಾಗಿ ನಾವೇ ಆ ಕಾರ್ಯವನ್ನು ನಿರ್ವಹಿಸಿದಲ್ಲಿ ನಮಗೆ ಶಹಭಾಸ್‌ಗಿರಿ ಗ್ಯಾರಂಟಿ!

ಅಜ್ಜ ಹೇಳುತ್ತಿದ್ದರು: 'ನಾಳೆಗೆ ಎಂದು ಯಾವುದೇ ಕೆಲಸ ಬಾಕಿ ಇಡಬೇಡ; ಇಂದೇ ಮಾಡಿ ಮುಗಿಸು.' ನಾಳೆ ಮಾಡುವ ಎಂಬ ಮಾತು ಅಜ್ಜನಲ್ಲಿ ಹೇಳಲೇಬಾರದು. ಹೇಳಿದರೆ ಅಜ್ಜನಿಗೆ ಕೋಪ ಬಾರದೆಯೂ ಇರುತ್ತಿರಲಿಲ್ಲ. ಒಂದುವೇಳೆ ಅಜ್ಜನ ಪರವಾಗಿ ನಾವೇ ಆ ಕಾರ್ಯವನ್ನು ನಿರ್ವಹಿಸಿದಲ್ಲಿ ನಮಗೆ ಶಹಭಾಸ್‌ಗಿರಿ ಗ್ಯಾರಂಟಿ!

### ಖಾದಿಪ್ರಿಯ

ಅಜ್ಜನ ಆಹಾರ, ಊಟ-ತಿಂಡಿ ಸೇವನೆ ತೀರ ಕಡಿಮೆ. ಕಾಫಿ ಹೆಚ್ಚು ಬಾರಿ; ಆದರೆ ಚಹಾ ಅಷ್ಟಕ್ಕಷ್ಟೆ. ಊಟ - ತಿಂಡಿ ಸೇವನೆಯಲ್ಲಿ ಬಹಳ ಅವಸರ. ಜೊತೆಗಿದ್ದವರು ಊಟ ಶುರುಮಾಡುತ್ತಿದ್ದಂತೆ ಅಜ್ಜ ಊಟ ಮುಗಿಸಿ ಕೈತೊಳೆಯುತ್ತಿದ್ದರು! ಅಜ್ಜನ ಮನೆಯಲ್ಲಿ ಸುಮಾರು ಏಳು ವರ್ಷ ವಾಸವಾಗಿದ್ದು, ಅಲ್ಲೇ ಊಟ ಮಾಡಿಕೊಂಡು ಅವರ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದೆ. (ಆರಂಭದ ಐದು ವರ್ಷ ಬೇರೆ ಕಡೆ ರೂಮ್ ಮಾಡಿಕೊಂಡಿದ್ದೆ.) ಆ ದಿನಗಳಲ್ಲಿ ನನಗೆ ಏನೂ ತೊಂದರೆ ಆಗದ ರೀತಿಯಲ್ಲಿ ಅಜ್ಜ - ಅಜ್ಜಿ ನೋಡಿಕೊಂಡಿದ್ದರು. ಗಾರ್ಡನ್, ಜೇನುಸಾಕಣೆ, ಅಂಚೆಚೀಟಿ - ನಾಣ್ಯ ಸಂಗ್ರಹ, ಅಕ್ವೇರಿಯಂ, ಚಲನಚಿತ್ರ ಪ್ರದರ್ಶನ, ಭಜನೆ ಇತ್ಯಾದಿ ವಿವಿಧ ಹವ್ಯಾಸ - ಚಟುವಟಿಕೆಗಳಲ್ಲಿ ಅಜ್ಜ ಬೆಳಿಗ್ಗೆ 4ರಿಂದ 6-30ರ ತನಕ ಹಾಗೂ ಸಾಯಂಕಾಲದಿಂದ ರಾತ್ರಿ 10ರ ತನಕ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಅವರು ತಮ್ಮ ಬಟ್ಟೆಗಳನ್ನು ತಾವೇ ಒಗೆದುಕೊಳ್ಳುತ್ತಿದ್ದರು. ಖಾದಿಬಟ್ಟೆ ಅವರಿಗೆ ಬಲು ಪ್ರಿಯ.

ಹೊಸ ಸ್ಟಾಂಪ್ ಬಿಡುಗಡೆಯ ದಿನ ಹಣಕೊಟ್ಟು ಅದನ್ನು ತರಲು ಕಳುಹಿಸುತ್ತಿದ್ದರು. ಅಂಚೆ ಇಲಾಖೆಯವರೂ ಅಜ್ಜನಿಗಾಗಿ ಕೂಡಲೇ ಸ್ಟಾಂಪ್ ಕೊಟ್ಟು ಸಹಕರಿಸುತ್ತಿದ್ದರು. ಅಜ್ಜ ಹೊಸ ಅಂಚೆಚೀಟಿಯ ಇಡೀ ಶೀಟ್

ಬರೆಯುತ್ತಿದ್ದರು. ಅದು ಅವರಿಗೆ, ಅವರ ಗೆಳೆಯರಿಗೆ, ಇಷ್ಟವಾದವು, ಆಫೀಸಿಗೆ.

ಅಜ್ಜ ಎಲ್ಲಿಗೆ ಹೋಗುವುದಿದ್ದರೂ ಬೆಳಿಗ್ಗೆ ಬೇಗನೇ ಹೋಗುವ ಅಭ್ಯಾಸ. ತಮಗನ್ನಿಸಿದ್ದನ್ನು ನೇರವಾಗಿ ಹೇಳುತ್ತಿದ್ದರು. ಅದು ಕೆಲವೊಮ್ಮೆ ಖಾರವಾಗಿಯೂ ಇರುತ್ತಿತ್ತು! ಆದರೆ ಅಜ್ಜನ ಕ್ರಮ ಹೆಚ್ಚಿನವರಿಗೆ ಗೊತ್ತಿದ್ದರಿಂದ ಅಜ್ಜನಿಗೆ ಸಿಟ್ಟು ಬಂತೆಂದರೆ ಯಾರೂ ಮರುಮಾತನಾಡುತ್ತಲೇ ಇರಲಿಲ್ಲ. ಐದು-ಹತ್ತು ನಿಮಿಷಗಳಲ್ಲೇ ಸಿಟ್ಟು ಇಳಿದುಬಿಡುತ್ತಿತ್ತು. ಆಗ ಅವರು ಹಿಂದೆ ಮಾತನಾಡಿದ್ದನ್ನೆಲ್ಲ ಮರೆತು ಸಂತೋಷವಾಗಿ, ಆತ್ಮೀಯವಾಗಿ ಮಾತನಾಡಿಸುತ್ತಿದ್ದರು.

ಕೊನೆಯದಾಗಿ ಒಂದು ಮಾತು. ಅಜ್ಜ ಛಂಡಸಾಲೆ (ಪ್ರೆಲೂರು ಅಂಡ್ ಕಂಪೆನಿ) ಬಂದ್ ಮಾಡುವ ಸಂದರ್ಭದಲ್ಲಿ ನಾನು ಅವರಲ್ಲಿ ಸರ್ವಿಸ್ ಸರ್ಟಿಫಿಕೇಟ್ ಕೇಳಲು ಹೋಗಿದ್ದೆ. ಆಗ ಅಜ್ಜ, 'ಈ ಛಂಡಸಾಲೆಯನ್ನು ನೀನು ನಡೆಸು; ಇನ್ನೊಬ್ಬರ ಕೈಕೆಳಗೆ ಕೆಲಸ ಮಾಡಿದಲ್ಲಿ ಭವಿಷ್ಯ ಇಲ್ಲ; ನೀನು ಸ್ವಂತ ಉದ್ಯೋಗದಿಂದ ಮೇಲೇರಲು ಸಾಧ್ಯವಿದೆ' ಎಂದಿದ್ದರು. ಆ ಮಾತುಗಳು ನನ್ನ ನೆನಪಿನಲ್ಲಿ ಇನ್ನೂ ಹಸಿರಾಗಿಯೇ ಇವೆ.

◆



**ಸತ್ಯನಾರಾಯಣ ಪೋನಡ್ಕ**
ಅಂಚೆ : ಚೊಕ್ಕಾಡಿ
ಸುಳ್ಯ ತಾಲೂಕು - 574 212
ದಕ್ಷಿಣ ಕನ್ನಡ

## ನಡೆಯದ ಭೇಟಿ!

ರಾಯರು ನಿಧನರಾದ ವಾರದ ಹಿಂದಿನ ವಾರ ಒಂದು ಬೆಳಗ್ಗೆ ನನಗೆ ಫೋನಾಯಿಸಿ, 'ಪಾವಂಜೆಯವರೇ, ನಮ್ಮಲ್ಲಿಗೆ ಬರ್ತೀರಾ?' ಎಂದು ಕೇಳಿದರು. ಏನು ವಿಶೇಷ ಎಂದು ಕೇಳಿದೆ. ನೀವು ಬನ್ನಿ, ಎಂದು ಕೂಡಲೇ ಫೋನ್ ಇಟ್ಟರು. ರಾಯರಿಗೆ ಯಾವಾಗಲೂ ಫೋನ್ ಕೆಳಗೆ ಇಡಲು ಅವಸರ. ಸಾಯಂಕಾಲ ಅವರನ್ನು ಕಾಣಲು ಹೋದೆ. ಬಾಗಿಲನ್ನು ತೆರೆದ, ರಾಯರನ್ನು ನೋಡಿಕೊಳ್ಳುತ್ತಿದ್ದ ನರ್ಸ್, 'ನೀವು ಪಾವಂಜೆಯವರಲ್ಲವಾ? ಅಜ್ಜ ನಿಮ್ಮನ್ನೇ ಕನವರಿಸುತ್ತಿದ್ದಾರೆ' ಎಂದಳು. ನೇರವಾಗಿ ಅವರ ಕೋಣೆಗೆ ಹೋದೆ.

ಎಂದಿನಂತೆ ರಾಯರ ಆತ್ಮೀಯ ಸ್ವಾಗತ. ಫಿಲಾಟೆಲಿಕ್ ಕ್ಲಬ್‌ನ ಬಗ್ಗೆ, ನನ್ನ ಆರೋಗ್ಯದ ಬಗ್ಗೆ, ಅನು-ಮುರಳಿಯ ಬಗ್ಗೆ ಎಲ್ಲಾ ವಿಚಾರಿಸಿದರು. ಸುಮಾರು ಎರಡು ಗಂಟೆಗಳ ಕಾಲ ನನ್ನ ಹತ್ತಿರ ನಗುನಗುತ್ತಾ, ಹಾಸ್ಯ ಚಟಾಕಿಗಳನ್ನು ಹಾರಿಸುತ್ತಾ ಇದ್ದರು. ಹೊರಡುವಾಗ ಅವರ ಕಾಲಿಗೆ ನಮಸ್ಕರಿಸಿ, 'ಇನ್ನು ಬರುವ ವಾರ ಕಾಣುವ' ಎಂದೆ. 'ಮುಂದಿನ ವಾರ ನೀವು ಬರುವಾಗ ನಾನು ಇರುವುದಿಲ್ಲ' ಎಂದರು. ಅವರ ಮಾತನ್ನು ನಾನು ಗಂಭೀರವಾಗಿ ಪರಿಗಣಿಸಲಿಲ್ಲ. ಆದರೆ ರಾಯರು ಹೇಳಿದಂತೆ ನನ್ನ-ಅವರ ಭೇಟಿ ಮುಂದಿನ ವಾರ ನಡೆಯಲೇ ಇಲ್ಲ!

- ಎಂ.ಆರ್. ಪಾವಂಜಿ



# ರಾಕೆಟ್ ಸ್ಪೀಡ್ : ಭಯವಿಲ್ಲದ ಬದುಕು

ಯಸ್. ನಾರಾಯಣ ರಾವ್

ನಾನು ಪೈಲೂರರನ್ನು ಕಂಡದ್ದು 1950ರಲ್ಲಿ. ಆಗ ಮದ್ರಾಸು ಸರಕಾರದಲ್ಲಿ ಮಂತ್ರಿಯಾಗಿದ್ದ ಕೋಟ ರಾಮಕೃಷ್ಣ ಕಾರಂತರು ಮಂಗಳೂರಿನಲ್ಲಿ ವಕೀಲ ವೃತ್ತಿ ಆರಂಭಿಸಿದ್ದರು. ಅವರಲ್ಲಿ ಒಂದು ವ್ಯಾಜ್ಯದ ರೆಕಾರ್ಡ್ ತೋರಿಸಲಿಕ್ಕೆ ಹೋಗಿದ್ದೆ. ಆಗ ಅವರು ತಾವು ಹೊಸದಾಗಿ ಕಟ್ಟಿದ ಕರ್ನಾಟಕ ಏಕೀಕರಣ ಪಾರ್ಟಿಯಲ್ಲಿ ಬಿಡುವಿನ ವೇಳೆ ಕೆಲಸ ಮಾಡಲು ಕೇಳಿಕೊಂಡರು. ಕೆಲಸವಿಲ್ಲದ ನಾನು ಸಂತೋಷದಿಂದ ಒಪ್ಪಿದೆ. ಸಂಬಳ ಇಲ್ಲ, ಖರ್ಚಿಗೆ 40 ರೂಪಾಯಿ ಕೊಡುತ್ತೇನೆ ಎಂದರು. ನನಗೆ ಸಂಬಳ ಬೇಕಾಗಿರಲಿಲ್ಲ. ಕಾರಂತರ ಒಡನಾಟದಲ್ಲಿ ಕೆಲಸ ಮಾಡುವುದೇ ಒಂದು ಹೆಮ್ಮೆ ಎಂದು ಅನಿಸಿತು. ಅವರ ಆಫೀಸಿನ ಕೆಳಗೆ ಉದಯ ಪ್ರಿಂಟರಿ ಪ್ರೆಸ್ ಇತ್ತು. ಸ್ವಲ್ಪ ಸಮಯದ ನಂತರ ಅವರ ಶಿಫಾರಸಿನಲ್ಲಿ ಅಲ್ಲಿ ಸೇರಿದೆ.

ಆಗ ಉದಯ ಪ್ರಿಂಟರಿಯಲ್ಲಿ ಪೈಲೂರರು ಡೈರೆಕ್ಟರರು ಎಂದು ತಿಳಿಯಿತು. ಅಂದಿನಿಂದ ಬೆಳೆಯಿತು ನಮ್ಮ ಆತ್ಮೀಯತೆ. ಆಗ ಅವರು ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘದಲ್ಲಿ ಕಾರ್ಯದರ್ಶಿಯಾಗಿದ್ದರು. ಆಫೀಸಿನಿಂದ ಮನೆಗೆ ಹೋಗುವಾಗ ವಾರದಲ್ಲಿ ಒಂದೆರಡು ಸಲ ಪ್ರೆಸ್ಸಿಗೆ ನುಗ್ಗಿ, 'ನಾರಾಯಣರಾಯರೇ ಹೇಗಿದ್ದೀರಿ... ಆಯ್ತು ಬರ್ತೇನೆ' ಎಂದು ತನ್ನ ಸೈಕಲನ್ನೇರಿ ನಾವು ಹೊರಗೆ ಬರುವುದರೊಳಗೆ ಅಷ್ಟು ದೂರ ಹೋಗಿರುತ್ತಿದ್ದರು.

**ಪಾದರಸದಷ್ಟು ಚುರುಕು**

ರಾಯರು ಪಾದರಸದಷ್ಟು ಚುರುಕು. ಖಾದಿ ಧೋತಿ-ಜುಬ್ಬ ಧರಿಸುತ್ತಿದ್ದರು. ನಿತ್ಯ ಶುಭ್ರವಸನಧಾರಿ. ಅವರು ಸ್ಯಾಕಲ್ ಕಚ್ಚೆ ಹಾಕಿ ಅವರ ಎರಡು ತುದಿಗಳನ್ನು ಕೈಯಲ್ಲಿ ಹಿಡಿದುಕೊಂಡು ನಡೆದರೆ ಅವರಿಗೆ ಯಾರೂ ಸರಿಸಾಟಿಯಿರಲಿಲ್ಲ. ಆಫೀಸಿನಲ್ಲೂ ಅಷ್ಟೆ. ಬೆಳಿಗ್ಗೆ ಎಲ್ಲರಿಗಿಂತ ಮೊದಲು ಆಫೀಸಿಗೆ ಪ್ರವೇಶ. ಅವರ ಕಾರ್ಯಚಟುವಟಿಕೆಗಳನ್ನು ನೋಡುವುದೇ ಒಂದು ವಿಶೇಷ. ಕೆಲವೇ ನಿಮಿಷಗಳಲ್ಲಿ ವಿವಿಧ ಕೃಷಿಕರ ಗೋಣಿಗಳಿಂದ ಅಡಿಕೆ ಸ್ಯಾಂಪಲ್ ತೆಗೆದು ಬುಟ್ಟಿಗಳನ್ನು ಬೆಂಚಿನ ಮೇಲೆ ಸಾಲಾಗಿ ಇಡಿಸುತ್ತಿದ್ದರು. ನಂತರ ಕೈಯಲ್ಲಿ ಒಂದು ಅಡಕತ್ತರಿ ಹಿಡಿದುಕೊಂಡು ಎಲ್ಲ ಬುಟ್ಟಿಗಳ ಅಡಿಕೆಗಳನ್ನು ಕತ್ತರಿಸಿ ಅವುಗಳ ಗುಣಮಟ್ಟಕ್ಕೆ ಸರಿಯಾಗಿ ವಿಂಗಡಿಸುತ್ತಿದ್ದರು.

> ಕರ್ತವ್ಯನಿಷ್ಠೆ, ಸಮಯಪ್ರಜ್ಞೆ ಹಾಗೂ ಮಾನವೀಯತೆಯನ್ನು ನಾವು ಪೈಲೂರರಿಂದ ಕಲಿಯಬೇಕು. ಅವರದ್ದು ಭಯವಿಲ್ಲದ ಬದುಕು. ಯಾಕೆಂದರೆ ಜೀವಿತದಲ್ಲಿ ಅವರು ಯಾರಿಗೂ ಕೇಡು ಬಗೆಯಲಿಲ್ಲ. ಕೆಟ್ಟ ಮಾತು ಆಡಲಿಲ್ಲ. ಸದಾ ಹಸನ್ಮುಖಿ. ಎಲ್ಲರಿಗೂ ಸನ್ಮಂಗಳವಾಗಲಿ ಎಂಬುದೇ ಅವರ ಹಾರೈಕೆ.

ಬಳಿಕ ರಾಯರು ಅಂದಿನ ಹರಾಜಿಗೆ ಬೇಕಾದಷ್ಟು ಅಡಿಕೆಯಿಟ್ಟು, ಎಲ್ಲಾ ಶೇಠುಗಳಿಗೆ ಫೋನ್ ಮಾಡುತ್ತಿದ್ದರು. ಅವರು ಬರುವ ಮೊದಲೇ ತಾಜ್ ಮಹಲಿನ ತಿಂಡಿ, ಕಾಫಿ-ಚಾ ಬಂದಾಯಿತು. ಆಗ ಹರಾಜಿನ ಕ್ರಮ ಈಗಿನಂತೆ ಇರಲಿಲ್ಲ. ಒಳ್ಳೆಯ ಸ್ಯಾಟಿನ್ ಬಟ್ಟೆಯ ಅಡಿಯಲ್ಲಿ ಬೆರಳುಗಳ ಸಂಜ್ಞೆಯ ಮೂಲಕ ದರ ತಿಳಿಸುತ್ತಿದ್ದರು. ಹಾಗೆ ಎಲ್ಲರಿಗೂ 'ಕೈ ಕೊಟ್ಟು' ಅದರಿಂದ ಹೆಚ್ಚಿನ ದರ ಹೇಳಿದವರ ಹೆಸರು ಬಹಿರಂಗಪಡಿಸುತ್ತಿದ್ದರು. ರಾಯರು ಅಡಿಕೆ ಕೃಷಿಕರಿಗೆ ಉತ್ತಮ ಕ್ರಯ ತೆಗೆಸಿಕೊಡುತ್ತಿದ್ದರು. ಇದರಿಂದಾಗಿ ಅವರು ಅಪಾರ ಮನ್ನಣೆ ಗಳಿಸಿದರು. ಸೊಸೈಟಿ ರಾಯರ ಕಾಲದಲ್ಲಿ ಅಗಾಧ ಬೆಳವಣಿಗೆಯನ್ನು ಕಂಡಿತ್ತು. ಅಡಿಕೆ ಬೆಳೆಗಾರರಿಗೆ ಅವರೊಬ್ಬ 'ಸಹಕಾರದ ಸಹಕಾರಿ ಮನುಷ್ಯ' ಆಗಿದ್ದರು.

1962ರಲ್ಲಿ ಪೈಲೂರರು ಹೆರಾಲ್ಡ್ ಕಾರು ಖರೀದಿಸಿದರು. ಆವಾಗ ಕಾರಿನ ಬೆಲೆ ಒಂಭತ್ತು ಸಾವಿರ ರೂಪಾಯಿ. ಆ ಕಾಲದಲ್ಲಿ ಮಂಗಳೂರಿನಲ್ಲಿದ್ದ ಕಾರುಗಳು ಬೆರಳೆಣಿಕೆಯಷ್ಟು. ಆಗ ಒಂಭತ್ತು ಸಾವಿರವೂ ದೊಡ್ಡ ಮೊತ್ತ. ಶುರು ಶುರುವಿಗೆ ರಾಯರು ಕಾರು ಬಿಡುವುದನ್ನು ನೋಡುವಾಗ ನಮಗೆ ಭಯ. ಮೊದಲನೇ ಗೇರಿನಲ್ಲೇ ರಾಕೆಟ್ ಸ್ಪೀಡಿನಲ್ಲಿ ಕಾರು ಎಬ್ಬಿಸುತ್ತಿದ್ದರು!

ಹೀಗೊಂದು ದಿನ ಜೀವವಿಮಾ ನಿಗಮದ ಅಭಿವೃದ್ಧಿ ಅಧಿಕಾರಿ ಶಿವರಾಯರು ಪೈಲೂರರ ಬಳಿಗೆ ಬಂದು ಅವರಿಗೆ ಎಲ್ಐಸಿ ಏಜೆನ್ಸಿ ವಹಿಸಿಕೊಟ್ಟರು. 'ನಿಮ್ಮಲ್ಲಿಗೆ ಬರುವ ಅಡಿಕೆ ಬೆಳೆಗಾರರು ಹಾಗೂ ಶೇಠುಗಳನ್ನು ವಿಮೆ ಮಾಡಿಸಲು ಒಪ್ಪಿಸಿ. ಬಾಕಿ ಎಲ್ಲ ಕೆಲಸ ನಾನು ಮಾಡುತ್ತೇನೆ. ನೀವೇನೂ ಚಿಂತೆ ಮಾಡಬೇಡಿ. ಕೂತಲ್ಲಿಗೆ ಧಾರಾಳ ಕಮಿಶನ್ ಬರುತ್ತದೆ' ಎಂದು ಪುಸಲಾಯಿಸಿದರು. ರಾಯರು ಸಮ್ಮತಿಸಿದರು. ಎರಡೇ ವರ್ಷಗಳಲ್ಲಿ ಅತಿ ಹೆಚ್ಚು ವ್ಯವಹಾರ ಕುದುರಿಸಿ ಅದಕ್ಕಾಗಿ ಪ್ರಶಸ್ತಿಯನ್ನೂ ಪಡೆದರು. ಪೈಲೂರರು ಜೀವವಿಮೆಯ ಅವಶ್ಯಕತೆ ಬಗ್ಗೆ ಪುಸ್ತಕವನ್ನೂ ಬರೆದು ಪ್ರಕಟಿಸಿದ್ದರು.



ಪೈಲೂರು ಲಕ್ಷ್ಮೀನಾರಾಯಣ ರಾವ್ ಯುವಕನಾಗಿದ್ದಾಗ.

ಅವರು ಎಷ್ಟು ಸ್ಪೀಡಿನಲ್ಲಿ ನಡೆಯುತ್ತಿದ್ದರೋ ಅವರ ಬರವಣಿಗೆಯೂ ಅಷ್ಟೇ ಸ್ಪೀಡಿನಲ್ಲಿತ್ತು. ಅವರು ಸೊಸೈಟಿಯಲ್ಲಿ ಯಾದಾಸ್ತುಗಳಿಗೆ ಸಹಿಹಾಕುವುದನ್ನು ನೋಡಿ ನಾನು ಬೆರಗಾಗಿದ್ದೆ. ಅದು ಕೂಡಾ ಇಡೀ ಹೆಸರಿನ ದಸ್ಕತ್ತು!

**ಭಯವಿಲ್ಲದ ಬದುಕು**

ಕರ್ತವ್ಯನಿಷ್ಠೆ, ಸಮಯಪ್ರಜ್ಞೆ, ಮಾನವೀಯತೆಯನ್ನು ನಾವು ಪೈಲೂರರಿಂದ ಕಲಿಯಬೇಕು. ಅವರದ್ದು ಭಯವಿಲ್ಲದ ಬದುಕು. ಯಾಕೆಂದರೆ ಜೀವಿತದಲ್ಲಿ ಅವರು ಯಾರಿಗೂ ಕೇಡು ಬಗೆಯಲಿಲ್ಲ. ಕೆಟ್ಟ ಮಾತು ಆಡಲಿಲ್ಲ. ಸದಾ ಹಸನ್ಮುಖಿ. ಎಲ್ಲರಿಗೂ ಸನ್ಮಂಗಳವಾಗಲಿ ಎಂಬುದೇ ಅವರ ಹಾರೈಕೆ. ಕೊನೆಯ ವರೆಗೂ ಪ್ರೆಸ್ಸಿನ ಆಡಳಿತ ಮಂಡಳಿಯಲ್ಲಿದ್ದ ಅವರ ಬಳಿಗೆ ಪ್ರೆಸ್ಸಿನ ಕೆಲಸದಲ್ಲಿ ಹೋಗುತ್ತಿದ್ದೆ. ಆಗೆಲ್ಲ ಅವರ ಆತ್ಮೀಯ ಸ್ವಾಗತದಿಂದ ನಾನು ಖುಶಿಪಡುತ್ತಿದ್ದೆ. ಎಂತಹ ಸಮಸ್ಯೆ ಬಂದರೂ ಅವರು ಬಹಳ ಸಹನೆಯಿಂದ ಬಗೆಹರಿಸುತ್ತಿದ್ದರು.

ಮನುಷ್ಯಜೀವನವನ್ನು ಉಲ್ಲಸಿತಗೊಳಿಸುವ, ಜೀವನೋತ್ಸಾಹವನ್ನು ವೃದ್ಧಿಸುವ, ಚೈತನ್ಯವನ್ನು ಇಮ್ಮಡಿಗೊಳಿಸುವ ಅನುಪಮ ಶಕ್ತಿ ಪೈಲೂರರಲ್ಲಿ ತುಂಬಿತ್ತು. ಅದುವೇ ಪ್ರೀತಿ. ಪ್ರೀತಿ ಎಂಬುದು ಅವರ ಬದುಕಿನ ಗೀತೆ. ಅಂತಹ ಮಹಾಚೇತನ ಮುಂದಿನ ಪೀಳಿಗೆಗೆ ಸ್ಫೂರ್ತಿಯ ಚಿಲುಮೆಯಾಗಿ ಕಂಡರೆ ಅಚ್ಚರಿ ಇಲ್ಲ. ◆



**ಯಸ್. ನಾರಾಯಣ ರಾವ್**
ಉದಯ ಪ್ರಿಂಟರಿ
ಕೊಡಿಯಾಲಬೈಲು
ಮಂಗಳೂರು - 575 003





1999ರಲ್ಲಿ ಜರುಗಿದ ಸುಳ್ಯ ತಾಲೂಕು 6ನೇ ಕನ್ನಡ ಸಾಹಿತ್ಯ ಸಮ್ಮೇ... ಅಂಗವಾಗಿ ಹಿರಿಯ ಸಹಕಾರಿ ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರಿಗೆ ...

# ಸಹಕಾರ ರಂಗಕ್ಕೆ ಸದಾ ಸಹಕಾರಿ

**• ಖಂಡಿಗೆ ಶಂಕರನಾರಾಯಣ ಭಟ್ಟ**

1939ನೇ ಇಸವಿಯ ಮೊದಲು ಹಳ್ಳಿಗಳಲ್ಲಿ ಮಣ್ಣಿನ ಮಡಿಕೆಗಳಲ್ಲಿ ಜೇನುಕುಟುಂಬಗಳನ್ನಿಟ್ಟು, ಜೇನು ತೆಗೆಯುತ್ತಿದ್ದರು. ಅನ್ನ ಬೇಯಿಸಿದ, ಸುಮಾರು 15 ಲೀಟರ್ ನೀರು ಹಿಡಿಸುವ ಮಡಿಕೆಯ ಬಾಯಿಗೆ ಅಡಿಕೆ ಹಾಳೆಯನ್ನು ಕಟ್ಟಿ ಮರಗಳಲ್ಲಿ ನೇತಾಡಿಸುತ್ತಿದ್ದರು. ಅದರಲ್ಲಿ ಬಂದು ಸೇರಿದ ಜೇನುಕುಟುಂಬಗಳ ಜೇನನ್ನು ತೆಗೆಯುತ್ತಿದ್ದರು. ಆಗ ಆ ಕುಟುಂಬಗಳು ಎಲ್ಲಿಗೋ ಹಾರಿಹೋಗುತ್ತಿದ್ದವು. ಅವುಗಳಿಗೆ ಸರಿಯಾದ ಆಶ್ರಯವೇ ಇಲ್ಲವಾಗುತ್ತಿತ್ತು. ಮಣ್ಣಿನ ಮಡಿಕೆಯ ಕ್ರಮದ ಬದಲಿಗೆ ಮರದ ಪೆಟ್ಟಿಗೆಗಳಲ್ಲಿ ಜೇನುಸಾಕುವುದನ್ನು ನಮಗೆ ಪ್ರತ್ಯಕ್ಷ ತೋರಿಸಿದವರು ಪೈಲೂರು ಲಕ್ಷ್ಮೀನಾರಾಯಣ ರಾಯರು.

> ರಾಯರ ಸಲಹೆ ಮೇರೆಗೆ ಕಾಸರಗೋಡು ಕೃಷಿಕರ ಸಹಕಾರಿ ಮಾರಾಟ ಸಂಘವನ್ನು ನೀರ್ಚಾಲಿನಲ್ಲಿ ಸ್ಥಾಪಿಸಿ, ಅದರ ಶಾಖೆಯನ್ನು ಮಂಗಳೂರಿನಲ್ಲಿಯೂ ತೆರೆದೆವು. ಆಗ ಸರಿಯಾದ ಗೋದಾಮು ಇಲ್ಲದೆ ನಾವು ಪರದಾಡುವಂತಾಯಿತು. ಆಗಲೂ ಸಂಘದ ಒಂದು ಗೋದಾಮನ್ನು ನಮಗೆ ಒದಗಿಸಿದವರು ಲಕ್ಷ್ಮೀನಾರಾಯಣ ರಾಯರು.

ಆ ಕಾಲದಲ್ಲಿ ಸಂಚಾರಕ್ಕೆ ಯಾವ ಸೌಲಭ್ಯವೂ ಇರಲಿಲ್ಲ. ಆದರೂ ಕಾಲ್ನಡಿಗೆಯಲ್ಲಾಗಲೀ ಎತ್ತಿನ ಗಾಡಿಯಲ್ಲಾಗಲೀ ಅವರು ಹಳ್ಳಿಗಳಲ್ಲಿ ಸಂಚರಿಸಿ ಕೃಷಿಕರಿಗೆ ಆಧುನಿಕ ಜೇನುವ್ಯವಸಾಯವನ್ನು ವಿವರಿಸುತ್ತಿದ್ದರು. ನಮ್ಮ ಖಂಡಿಗೆ ಮನೆಗೂ ಬಂದು ಜೇನುಕುಟುಂಬವನ್ನು ಮಣ್ಣಿನ ಮಡಿಕೆಯಿಂದ ಮರದ ಪೆಟ್ಟಿಗೆಗೆ ವರ್ಗಾಯಿಸುವ ಕ್ರಮವನ್ನು ಮಾಡಿತೋರಿಸಿದ್ದರು. ಆ ಕ್ರಮವನ್ನು ಈಗಲೂ ನಾನು ಮಾಡುತ್ತಿದ್ದೇನೆ. ಯುವ ಕೃಷಿಕರಿಗೆ ಇದು ಬಹಳ ಆರೋಗ್ಯಕರವಾದ ಹವ್ಯಾಸ. ಪೇಟೆಗಳಲ್ಲಿಯೂ ಒಂದು ಅಥವಾ ಎರಡು ಗೂಡುಗಳನ್ನಿಟ್ಟು ಜೇನುಸಾಕಣೆ ಮಾಡಬಹುದು. ಮಂಗಳೂರು ನಗರದಲ್ಲೇ ರಾಯರು ಜೇನುಸಾಕಣೆ ಮಾಡಿದ್ದರು.

1956ನೇ ಇಸವಿಯಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯಾದ ಬಳಿಕ ಕಾಸರಗೋಡಿನವರಾದ ನಮಗೆ ತುಂಬಾ

ಅನನುಕೂಲವೂ, ಅನ್ಯಾಯವೂ ಆಯಿತು. ಅಲ್ಲಿಯ ಕೃಷಿಕರು ಯಾವುದೇ ಕೃಷಿ ಉತ್ಪತ್ತಿಯನ್ನು, ಮುಖ್ಯವಾಗಿ ಅಡಿಕೆಯನ್ನು ಮಂಗಳೂರು ಮಾರ್ಕೆಟ್‌ಗೆ ಕೊಂಡುಹೋಗುವಂತಿರಲಿಲ್ಲ. ಮಂಗಳೂರಿಗೆ ಅಡಿಕೆ ಸಾಗಿಸಬೇಕಿದ್ದರೆ ಕಲ್ಲಿಕೋಟೆಯಲ್ಲಿರುವ ಮಲಬಾರ್ ಮಾರ್ಕೆಟ್ ಕಮಿಟಿಯ ಪರವಾನಗಿ ಬೇಕಿತ್ತು. ಹಾಗೆ ಲೈಸೆನ್ಸ್ ಮಾಡಿಸಿ ಮಂಗಳೂರಿನ ದಕ್ಷಿಣ ಕನ್ನಡ ಕೃಷಿಕರ ಸಹಕಾರಿ ಮಾರಾಟ ಸಂಘಕ್ಕೆ ಅಡಿಕೆ ಮಾರಾಟಮಾಡುವ ವ್ಯವಸ್ಥೆ ಮಾಡಿಕೊಂಡೆವು. ಆಗ ಅಲ್ಲಿ ಕಾರ್ಯದರ್ಶಿಯಾಗಿದ್ದವರು ಪೈಲೂರು ಲಕ್ಷ್ಮೀನಾರಾಯಣ ರಾಯರು. ಅವರು ಕಾಸರಗೋಡಿನ ಅಡಿಕೆಗೆ ನ್ಯಾಯವಾದ ಬೆಲೆ ಸಿಗುವಂತೆ ಮಾಡಿದರು.



ಅವರ ಸಲಹೆ ಮೇರೆಗೆ ಕಾಸರಗೋಡು ಕೃಷಿಕರ ಸಹಕಾರಿ ಮಾರಾಟ ಸಂಘವನ್ನು ನೀರ್ಚಾಲಿನಲ್ಲಿ ಸ್ಥಾಪಿಸಿ ಅದರ ಶಾಖೆಯನ್ನು ಮಂಗಳೂರಿನಲ್ಲಿಯೂ ತೆರೆದೆವು. ಆಗ ಸರಿಯಾದ ಗೋದಾಮು ಇಲ್ಲದೆ ನಾವು ಪರದಾಡುವಂತಾಯಿತು. ಆಗಲೂ ಸಂಘದ ಒಂದು ಗೋದಾಮನ್ನು ನಮಗೆ ಒದಗಿಸಿದವರು ಲಕ್ಷ್ಮೀನಾರಾಯಣ ರಾಯರು. ನಮಗೆ ವ್ಯಾಪಾರದಲ್ಲಿ ಸಮಸ್ಯೆಯಾಗುವ ಮಧ್ಯವರ್ತಿಗಳ ತೊಂದರೆಗಳನ್ನೆಲ್ಲವನ್ನೂ ಅವರು ನಿವಾರಿಸಿದರು. ಇದಕ್ಕಾಗಿ ನಾವು ಅವರಿಗೆ ಚಿರಋಣಿಗಳಾಗಿದ್ದೇವೆ.





**ಖಂಡಿಗೆ ಶಂಕರನಾರಾಯಣ ಭಟ್ಟ**
**ಬಡಗಮೂಲೆ**
**ಅಂಚೆ : ನೀರ್ಚಾಲು**
**ಕಾಸರಗೋಡು - 671 321**

ಅಜ್ಜನ ಕೈಯಲ್ಲಿ ಹೂಬಟ್ಟು ಸುವರ್ಣಗೆಡ್ಡೆ.

# ಪ್ರಾತಃಸ್ಮರಣೀಯ ಪೈಲೂರು

**ಉರಿಮಜಲು ಶಿವರಾಮ ಭಟ್ಟ**

ಸುಂದರ ವ್ಯಕ್ತಿತ್ವದ ಪೈಲೂರು ಲಕ್ಷ್ಮೀನಾರಾಯಣ ರಾಯರ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೆ. ಇತರರಿಗೆ ಉಪಕಾರ ಮಾಡುವ ಅವಕಾಶವನ್ನೆಂದೂ ಅವರು ತಪ್ಪಿಸಿಕೊಂಡವರಲ್ಲ; ಸಹಾಯ ಕೋರಿ ಬಂದವರಿಗೆ ಎಂದೂ ನಿರಾಶೆ ಮಾಡಿದವರಲ್ಲ.

ಒಮ್ಮೆ ಬದಿಯಡ್ಕದಿಂದ ಅಪರಿಚಿತರೊಬ್ಬರು ಅವರಲ್ಲಿಗೆ ಬಂದಿದ್ದರು. ಆ ಸಮಯದಲ್ಲಿ ನಾನು ಪೈಲೂರು ಅವರೊಂದಿಗಿದ್ದೆ. ಪೈಲೂರು ಬಂದವರೊಂದಿಗೆ ಮಾತಿಗೆ ತೊಡಗಿದರು. ನನಗೆ ಆಶ್ಚರ್ಯವಾಯಿತು! ಏಕೆಂದರೆ, ಅವರಿಬ್ಬರೂ ಪರಿಚಿತರಂತೆ ಬಹು ಆಪ್ತವಾಗಿ ಮಾತನಾಡುತ್ತಿದ್ದರು. ಅದಾಗಲೇ ಬಾಯಾರಿಕೆ ಬಂದಿತ್ತು. ಕಾಫಿ ಕುಡಿಯುತ್ತ ಪೈಲೂರು ಅವರೇ 'ಏನು ಬಂದಿದ್ದೀರಿ, ಸಹಾಯ ಏನಾದ್ರೂ ಬೇಕಿತ್ತಾ?' ಎಂದು ಪ್ರಸ್ತಾಪಿಸಿದರು. ಬಂದವರಿಗೆ ನಿರಾಳವಾಯಿತು. ಅವರು ಸ್ವಲ್ಪ ಹಿಂಜರಿಕೆಯಿಂದಲೇ 'ಒಂದು ಸಾವಿರ ರೂಪಾಯಿ



ಬೇಕಿತ್ತು... ಈಗ ಅಡಿಕೆ ಸಮಯವೂ ಅಲ್ಲ. ನಂತರ ಮಂಡಿಗೆ ಅಡಿಕೆ ಹಾಕುತ್ತೇನೆ' ಎಂದು ಹೇಳಿದರು. 'ಹಾಂ, ಅದಕ್ಕೇನಂತೆ ಆಯ್ತು' ಎಂದು ಒಪ್ಪಿಯೇಬಿಟ್ಟರು ಪೈಲೂರು ಅವರು. ಕೃತಜ್ಞತಾಭಾವದಿಂದ ಬಯಿಯಪ್ಪದವರು ತೆರಳಿದರು. ಮತ್ತೆ ವ್ಯವಹಾರ ಸರಿಯಾಯಿತು. ಇಂತಹ ಅನೇಕ ಉದಾಹರಣೆಗಳು ರಾಯರ ಬಹುಮುಖಿ ವ್ಯಕ್ತಿತ್ವವನ್ನು ಅನಾವರಣಗೊಳಿಸಿವೆ.

ಸಂಪರ್ಕ, ಸಂವಹನ ವ್ಯವಸ್ಥೆ ಇಲ್ಲದಂತಹ ಅಂದಿನ ದಿನಗಳಲ್ಲಿಯೂ ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ಪೈಲೂರು ಅವರು ಅಪಾರ ಜನಸಂಪರ್ಕ ಹೊಂದಿದ್ದರು. ಮಂಗಳೂರಿಗೆ ಬಂದು ಪೈಲೂರು ಅವರ ಆತಿಥ್ಯ ಪಡೆಯದವರು ವಿರಳ. ಪೈಲೂರು ಅವರ ಮನೆಯೊಂದು ಛತ್ರದಂತಿತ್ತು. ಅವರ ಪತ್ನಿ ಆತಿಥ್ಯದ ಜವಾಬ್ದಾರಿಯನ್ನು ಸಂತೋಷದಿಂದ ನಿರ್ವಹಿಸುತ್ತಿದ್ದರು.

ಖಾದಿಧಾರಿಯಾದ ಪೈಲೂರು ಅವರು ಚುರುಕುಮತಿ. 'ಎದುರಿನವನೇನು' ಎಂಬುದನ್ನು ಅರಿತು ಮಾತಾಡುವ ಸಹೃದಯಶೀಲರು. ಒಮ್ಮೆ ಪರಿಚಯವಾದರೆ ಸಾಕು ನಂತರ ಅವರೇ ಮಾತನಾಡಿಸುತ್ತಿದ್ದರು. ಉಳಿದವರ ವಿಚಾರಗಳಿಗೆ ಸ್ಪಂದಿಸುವ ಮನಸ್ಸು, ಕಾಳಜಿ ಅವರಿಗಿತ್ತು. ನನ್ನ ತಂದೆ ಉರಿಮಜಲು ವೆಂಕಪ್ಪಯ್ಯ ಮತ್ತು ನಮ್ಮ ಕುಟುಂಬದವರಿಗೆ ಅವರು ಪ್ರಾತಃಸ್ಮರಣೀಯ ವ್ಯಕ್ತಿಯಾಗಿದ್ದರು.

ಕೃಷಿಕರಿಗೆ ನ್ಯಾಯ ಸಿಗಬೇಕೆಂಬ ನಿಲುವಿನೊಂದಿಗೆ ಕೃಷಿಕರ ಪರವಾಗಿ ಪೈಲೂರು ಅವರು ಸದಾ ಇರುತ್ತಿದ್ದರು. ಆ ನೆಲೆಯಲ್ಲೇ ವ್ಯವಹರಿಸುತ್ತಿದ್ದರು. ಬೆಳಿಗ್ಗೆ ಮತ್ತು ಸಂಜೆ ಅವರ ಕಾರಿನಲ್ಲಿ ಶಾಲಾ ಕಾಲೇಜಿನ ಮಕ್ಕಳಿರುತ್ತಿದ್ದರು. ಯಾರಾದರೂ, 'ಮಕ್ಕಳನ್ನು ಶಾಲೆಗೆ ಬಿಡುವುದಕ್ಕೆ ಹೋಗುತ್ತಿದ್ದೀರಾ?' ಎಂದು ಕೇಳಿದರೆ, 'ಇಲ್ಲ, ನಾನು ಹೇಗೂ ಆಚೆ ಹೋಗುವವ. ಇವರೆಲ್ಲರೂ ಶಾಲಾ ಕಾಲೇಜಿಗೆ ಹೋಗುವವರು; ಬನ್ನಿ ಅಂದೆ, ಅಷ್ಟೆ' ಎನ್ನುತ್ತ ನಗುತ್ತಿದ್ದರು. ಇಂತಹ ಹಲವು ಸನ್ನಿವೇಶಗಳನ್ನು ನಾನು ನೋಡಿದ್ದೇನೆ, ಅವರ ಬಗ್ಗೆ ಅಭಿಮಾನಪಟ್ಟಿದ್ದೇನೆ.

**ಸಾತ್ವಿಕ ಸಿಟ್ಟು**

ಸೂಕ್ಷ್ಮಗ್ರಾಹಿಯಾದ ಪೈಲೂರು ಅವರು ಕೆಲವೊಮ್ಮೆ ಸಿಟ್ಟಿಗೇಳುತ್ತಿದ್ದುದೂ ಉಂಟು. ಅದು 'ಸಾತ್ವಿಕ' ಸಿಟ್ಟಾಗಿರುತ್ತಿತ್ತು. ಸಿಟ್ಟು ಇಳಿದ ನಂತರದ ಒಂದು ಹೃದ್ಯವಾದ ನಗು ಎಂಥವರನ್ನೂ ಮೃದುವಾಗಿಸುತ್ತಿತ್ತು. ಅನಾಥರ ಮೇಲೆ ಅವರಿಗೆ ವಿಶೇಷ ಮಮತೆ. ಈ ಹಿನ್ನೆಲೆಯಲ್ಲಿ ಪುತ್ತೂರಿನ ರಾಮಕೃಷ್ಣ ಸೇವಾ ಸಮಾಜದ ಜೊತೆ ಅವರಿಗೆ ಸ್ನೇಹವಿತ್ತು.

'ಮೌಲ್ಯ'ದ ಪ್ರತೀಕವಾಗಿ ಬದುಕಿನಲ್ಲೆಂದೂ ಫೇಲಾಗದ ಪೈಲೂರು ಲಕ್ಷ್ಮೀನಾರಾಯಣ ರಾಯರು ವಿಶೇಷ ವ್ಯಕ್ತಿತ್ವದ ವಿರಳ ವ್ಯಕ್ತಿ.





**ಉರಿಮಜಲು ಶಿವರಾಮ ಭಟ್ಟ**
'ಪಾರ್ವತಿ ನಿಲಯ'
ಇಡ್ಕಿದು ಗ್ರಾಮ, ಅಂಚೆ : ಮಿತ್ತೂರು
ಬಂಟ್ವಾಳ ತಾಲೂಕು - 574 224
ದಕ್ಷಿಣ ಕನ್ನಡ


ಮಂಗಳೂರಿನ ಸಾಯಿ ಮಂದಿರ.

# ಎಂದೂ ಮರೆಯಲಾಗದ ಪೈಲೂರು

ರಾ.ಮೊ. ವಿಶ್ವಾಮಿತ್ರ

ಮಾನವೀಯ ಮೌಲ್ಯಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಸಾರ್ಥಕ ಜೀವನವನ್ನು ನಡೆಸಿದ ಪುಣ್ಯಾತ್ಮರಲ್ಲಿ ಶ್ರೀಯುತ ಪೈಲೂರು ಲಕ್ಷ್ಮೀನಾರಾಯಣ ರಾವ್ ಒಬ್ಬರಾಗಿರುವರು. ಅವರಿಗೆ ಎಲ್ಲರ ಮೇಲೂ ಪ್ರೀತಿ; ಅವರಲ್ಲೂ ಎಲ್ಲರಿಗೂ ಪ್ರೀತಿ.

'ನಮ್ಮ ಪ್ರೀತಿಯ ಅಜ್ಜ' ಎಂದು ಅವರನ್ನು ಶಿವರಾಂ ಪೈಲೂರು ಎದೆತೆರೆದು ಕರೆದಿದ್ದಾರೆ. ಒಂದು ದಿನ ರಾಯರ ಮನೆಗೆ ನಾನು ಹೋಗಿದ್ದಾಗ ಅಲ್ಲಿ ಅವರ ಮೊಮ್ಮಗಳು ಬಳಪದ ಹಲಗೆಯಲ್ಲಿ 'ಪ್ರೀತಿಯ ಅಜ್ಜ' ಎಂದು ಬರೆದಿಟ್ಟದ್ದನ್ನು ನೋಡಿದ್ದೇನೆ. ಆ ಅಜ್ಜನಿಗೆ ಮೊಮ್ಮಕ್ಕಳಲ್ಲಿ ತುಂಬಾ ಪ್ರೀತಿ. ಮಕ್ಕಳೊಂದಿಗೆ ಮಗುವಾಗಿ ಆಡುವ ಸ್ವಭಾವ ಅವರಲ್ಲಿತ್ತು. ಒಂದು ಬಾರಿ ಮಗುವಿನ ಮುಂದೆ ಕುಳಿತು 'ನೋಡಿರಿ ಅಜ್ಜನ ಮ್ಯಾಜಿಕ್' ಎಂದರು. ಹಾಗೆಯೇ ಆ ಮಗು ನೋಡುತ್ತಿದ್ದಂತೆಯೇ ತನ್ನ ತಲೆಯ ಮೇಲೆ ಕೈಯಿಟ್ಟು, ನಗುತ್ತಾ ಬಾಯಿ ತೆರೆದರು. ಅಷ್ಟರಲ್ಲಿ ಉದ್ದವಾಗಿ ನಾಲಿಗೆಯನ್ನು ಹೊರಹಾಕಿ ಮರುಕ್ಷಣದಲ್ಲಿಯೇ ಆ ಕೈಯನ್ನು ತಲೆಯಿಂದ ತೆಗೆದು ಬಾಯಿ ಮುಚ್ಚಿಕೊಂಡರು. ನಾಲಿಗೆ ಕಾಣದಾಯಿತು. 'ಹೇಗಿದೆ ಮ್ಯಾಜಿಕ್?' ಎಂದು ಮಗುವಿನೊಂದಿಗೆ ತಾವೂ ನಕ್ಕರು. ಹೀಗೆ ಅವರು ಅತಿ ಪ್ರೀತಿಯಿಂದ ಮೊಮ್ಮಕ್ಕಳೊಂದಿಗಿದ್ದು ಆಡುತ್ತಿದ್ದರು. ಅವರ ಮನೆಯಲ್ಲಿ ಹಲವರು ಮೊಮ್ಮಕ್ಕಳು ಬೆಳೆದು ದೊಡ್ಡವರಾಗಿದ್ದಾರೆ. ಅವರದು ದೊಡ್ಡ ಸಂಸಾರ. ಹಾಗೆಯೇ ದೊಡ್ಡ ಮನೆತನ. ದೊಡ್ಡ ಮನೆತನದಲ್ಲಿ ಹುಟ್ಟಿ ದೊಡ್ಡವರ ಸಹವಾಸ ಇಟ್ಟುಕೊಂಡು ಒಳ್ಳೆಯ ಜೀವನ ನಡೆಸಿದ ಕೀರ್ತಿ ಅವರದು.

**ಹೊಟ್ಟೆ ನನ್ನದು ತಾನೆ?**

ಕಡಲ ತೀರದ ಭಾರ್ಗವರೆಂದು ಹೆಸರಾದ ಡಾ. ಶಿವರಾಮ ಕಾರಂತರು ಪೈಲೂರು ಅವರ ಆಪ್ತ ಮಿತ್ರರಲ್ಲಿ ಒಬ್ಬರಾಗಿದ್ದರು. ಒಂದು ದಿನ ಕಾರಂತರು ಪೈಲೂರರ ಮನೆಗೆ ಬಂದಾಗ ಪ್ಲೇಟ್ ತುಂಬಾ ತಿಂಡಿಯನ್ನಿಟ್ಟು ಪಾನೀಯ ಕೊಟ್ಟಾಗ ಕಾರಂತರು 'ಇಷ್ಟೇ ಸಾಕು' ಎಂದು ಸ್ವಲ್ಪವೆ ಸ್ವೀಕರಿಸಿದರಂತೆ. ಪೈಲೂರರು 'ಒಳ್ಳೆಯ

ಹೋಳಿಗೆ, ತಿನ್ನಿರಿ' ಎಂದಾಗ ಕಾರಂತರು 'ರಾಯರೇ, ತಿಂಡಿ ನಿಮ್ಮದು, ಚೆನ್ನಾಗಿದೆ ಗೊತ್ತು. ಆದರೆ ಹೊಟ್ಟೆ ನನ್ನದು ತಾನೆ? ಅದು ಬೇಕಾದಷ್ಟೆ ತಿನ್ನುವುದು' ಎಂದರಂತೆ! ಹೀಗೆ ವಿನೋದಪ್ರಿಯರ ಮಾತುಕತೆ ನಡೆಯಿತೆಂದು ಪೈಲೂರರೇ ನುಡಿದಿದ್ದರು.

ಹೆಸರು ಉದ್ದವಾಗಿರುವುದರಿಂದ ನಾವು ಅವರನ್ನು ರಾಯರೇ ಎಂದು ಕರೆಯುವುದು ರೂಢಿಯಾಗಿತ್ತು. ಅವರು ನನ್ನನ್ನು ಪ್ರೀತಿಯಿಂದ 'ಮಾಷ್ಟ್ರೇ' ಎಂದು ಕರೆದರೆ 'ರಾಯರೇ, ನೀವು ಎಲ್ಲದರಲ್ಲೂ ನನಗೆ ಗುರುಗಳು' ಎನ್ನುತ್ತಿದ್ದೆ. 'ಮಾಷ್ಟ್ರು ಎಂದರೆ ಎಲ್ಲರಿಗೂ ಮಾಷ್ಟ್ರೇ' ಎಂದು ಅವರು ನಗುತ್ತಿದ್ದರು. ಬೆಳಗಾತ ಎದ್ದು, ನಿತ್ಯವಿಧಿಗಳನ್ನು ತೀರಿಸಿ, ತೋಟದ ಹೂಗಿಡಗಳಿಗೆ ನೀರು ಹಾಕುವುದು ಮೊದಲಾಗಿ ತಮ್ಮ ಮನೆಗೆಲಸಗಳನ್ನು ಆಸಕ್ತಿಯಿಂದ ಅವರೇ ಮಾಡುತ್ತಿದ್ದರು. ಅವರು ಯಾವುದೇ ಕೆಲಸವನ್ನು ಮಾಡಲಿ, ಅದನ್ನು ಬಹಳ ಶ್ರದ್ಧೆಯಿಂದ ಜಾಗ್ರತೆಯಾಗಿ ಮಾಡುತ್ತಿದ್ದರು.



ಮಗಳು ಇಂದಿರಾ ಅವರ ಮದುವೆಯ ಸಂದರ್ಭದಲ್ಲಿ ರಾಯರು : 1961.

> ರಾಯರು ತಮ್ಮ ಕಷ್ಟವನ್ನು ಇತರರಲ್ಲಿ ಹಂಚಿಕೊಳ್ಳದೆ ಎಲ್ಲರಿಗೂ ತನ್ನಿಂದಾದ ಸಂತೋಷ ನೀಡುವ ಘನವ್ಯಕ್ತಿಗಳಾಗಿ ಮೆರೆದರು. ಅವರನ್ನು ಕಂಡು ಒಡನಾಟ ಗೈದವರು ಎಂದೂ ಅವರನ್ನು ಮರೆಯಲಾರರು. ಅವರ ಸೇವಾ ಮನೋಭಾವ, ಕಾರ್ಯತತ್ಪರತೆಯನ್ನು ಕಂಡವರು ಅವರನ್ನು ಕೊಂಡಾಡುವರು.

### ಉದಾರ ನೆರವು

ರಾಯರು ಅವರ ಅಣ್ಣನವರನ್ನು ವಿಶೇಷ ಭಕ್ತಿ ಗೌರವಗಳಿಂದ ಕಂಡವರು. ಹಿರಿಯಣ್ಣ ಪಿತೃಸಮಾನನೆಂದು ಅವರ ಭಾವನೆ. ಅವರು ಕೊಟ್ಟ ಆಸ್ತಿಯ ಪಾಲನ್ನು ಸಂತೋಷದಿಂದ ತೆಗೆದುಕೊಂಡು ಮಕ್ಕಳಿಗಿತ್ತವರು. ಅದಕ್ಕಾಗಿ ಜಗಳವಾಡಿದವರಲ್ಲ. ಅಡಿಕೆ ಸೊಸೈಟಿಯ ಕಾರ್ಯವನ್ನು ಅಂದವಾಗಿ ನಿರ್ವಹಿಸಿ ಸಂಜೆ ಮನೆಗೆ ಬಂದು ಶ್ರೀ ಸತ್ಯಸಾಯಿ ಸೇವಾ ಸಮಿತಿಯ ಚಟುವಟಿಕೆಗಳಿಗೆ ಮಾರ್ಗದರ್ಶನ ನೀಡುತ್ತಿದ್ದರು. ಸ್ವಂತ ಶ್ರಮದ ಸಂಪತ್ತು ಯಾವುದಿದೆಯೋ ಅದರಿಂದ ದಾನಧರ್ಮಾದಿ ಸತ್ಕಾರ್ಯಗಳನ್ನು ಮಾಡುತ್ತಿದ್ದರು. ಯಾರೇ ಆಗಲಿ ಕಷ್ಟದಲ್ಲಿದ್ದರೆ ಆದಷ್ಟು ನೆರವನ್ನು ನೀಡುವಂತಹ ಪ್ರವೃತ್ತಿಯನ್ನು ಅವರು ಬೆಳೆಸಿಕೊಂಡು ಬಂದಿದ್ದರು. ಇದು ಎಲ್ಲರಿಗೂ ತಿಳಿದ ವಿಷಯ.

1966ರ ವೇಳೆಗೆ ಪ್ರತಿ ವರ್ಷ ಸ್ವಾಮಿಯ ಹುಟ್ಟುಹಬ್ಬದ ಸಂದರ್ಭದಲ್ಲಿ ಮದರಾಸಿನ ಸ್ಟುಡಿಯೋದವರನ್ನು ಬರಮಾಡಿ ಪುಟ್ಟಪರ್ತಿಯಲ್ಲಿ ಸ್ವಾಮಿಯ ಚಲಚ್ಚಿತ್ರ ತೆಗೆಯುವುದಕ್ಕೆ ಏರ್ಪಾಡು ಮಾಡುತ್ತಿದ್ದರು. ಬಂದವರಿಗೆ ರೂಮಿನ ವ್ಯವಸ್ಥೆ ಮಾಡಿ, ರಾಯರು ಅಲ್ಲಿ ಶೆಡ್ಡಿನಲ್ಲೋ ಎಲ್ಲಾದರೊಂದು ಕಡೆ ಇರುತ್ತಿದ್ದರು. ತಮ್ಮ ಸುಖದ ಅಪೇಕ್ಷೆ ಅವರಿಗಿರಲಿಲ್ಲ. ಹಾಗೆ ತೆಗೆಸಿದಂತಹ ಫಿಲ್ಮನ್ನು ತಮ್ಮದೇ ಪ್ರೊಜೆಕ್ಟರಿಯಲ್ಲಿ ತಮ್ಮದೇ ಖರ್ಚಿನಲ್ಲಿ ಎಲ್ಲಿ ಕರೆದರಲ್ಲಿ ಹೋಗಿ ತೋರಿಸುತ್ತಿದ್ದರು. ಭಗವಂತನ ಚಿತ್ರ ತಾನು ತೋರಿಸಿದೆನೆಂಬ ಆತ್ಮತೃಪ್ತಿ

ಆದರವಾಗಿತ್ತು. ಅವರು ಮಲೇಷ್ಯಾದಲ್ಲೂ ಕೂಡ ಸ್ವಾಮಿಯ ಚಲಚ್ಚಿತ್ರ ಪ್ರದರ್ಶನ ನಡೆಸಿದ್ದರು.

ಶ್ರೀ ಸತ್ಯಸಾಯಿ ಬಳಗದವರೆಲ್ಲರಿಗೂ ರಾಯರೆಂದರೆ ಅತ್ಯಂತ ಪ್ರೀತಿ ಗೌರವ. ಅವರ ಸಹಧರ್ಮಿಣಿ ಶ್ರೀಮತಿ ಪರಮೇಶ್ವರಿ ಅಮ್ಮನವರು ಸ್ವಾಮಿಯ ಸಂದೇಶವನ್ನು ತಿಳಿಸಿ ಒಳ್ಳೆಯದಾಗುವುದಕ್ಕೆ ಬೇಕಾದ ಮಾರ್ಗದರ್ಶನ ಹಾಗೂ ಪ್ರೇರಣೆ ನೀಡುತ್ತಿದ್ದರು. ಈ ಪುಣ್ಯ ಎಲ್ಲರಿಗೂ ಸಿಗುವುದಿಲ್ಲ. ರಾಯರು ಸತ್ಯಸಾಯಿ ಸಾಹಿತ್ಯವನ್ನು ಪ್ರಚಾರ ಮಾಡಲು ಶ್ರೀ ಹೆಚ್.ಎಂ. ಶಿವರಾಂ ಅವರಿಗೆ ನೆರವಾಗುತ್ತಿದ್ದರು. ಅವರು ಮಂಗಳೂರಿಗೆ ಬಂದರೆ ರಾಯರು ಮನೆಯಿಂದ ಸತ್ಯಸಾಯಿ ಮಂದಿರಕ್ಕೆ ಕರಕೊಂಡು ಬಂದು ಅವರ ಉಪನ್ಯಾಸದ ಏರ್ಪಾಡು ಮಾಡುತ್ತಿದ್ದರು. ಸ್ವಾಮಿಯ ಕುರಿತು ಶ್ರೀಮತಿ ಶಾಂತಾ ಎ. ದಿವಾಕರ್ ಸಂಯುಕ್ತ ಕರ್ನಾಟಕದಲ್ಲಿ ಬರೆದಿದ್ದ ಲೇಖನವನ್ನು ಅವರ ಅನುಮತಿ ಪಡೆದು ಪುಸ್ತಕ ರೂಪದಲ್ಲಿ ಮುದ್ರಿಸಿದ್ದರು. ಮಾತ್ರವಲ್ಲದೆ ಸಮಿತಿಯ ಹೆಸರಿನಲ್ಲಿ ಐದು ಸಾವಿರ ಪ್ರತಿಗಳನ್ನು ಉಚಿತವಾಗಿ ಹಂಚಿದ್ದರು.



### ಮರೆಯಲಾಗದವರು

ರಾಯರು ಮಂಗಳೂರಿನ ಶ್ರೀ ಸತ್ಯಸಾಯಿ ಸೇವಾ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಲ್ಲದೆ ಈಶ್ವರಾಂಬಾ ಟ್ರಸ್ಟಿನ ಸ್ಥಾಪಕ ಸದಸ್ಯರಲ್ಲೊಬ್ಬರಾಗಿಯೂ ಕಾರ್ಯ ನಿರ್ವಹಿಸಿದ್ದರು. ಜೇನುವ್ಯವಸಾಯ, ಅಂಚೆಚೀಟಿ ಸಂಗ್ರಹ, ಬಣ್ಣದ ಮೀನುಸಾಕಣೆ ಮೊದಲಾದ ಕ್ಷೇತ್ರಗಳಲ್ಲಿ ಒಳ್ಳೆಯ ಹೆಸರನ್ನು ಗಳಿಸಿ ಖ್ಯಾತರಾಗಿದ್ದ ರಾಯರು ತಮ್ಮ ಕಷ್ಟವನ್ನು ಇತರರಲ್ಲಿ ಹಂಚಿಕೊಳ್ಳದೆ ಎಲ್ಲರಿಗೂ ತನ್ನಿಂದಾದ ಸಂತೋಷ ನೀಡುವ ಘನವ್ಯಕ್ತಿಗಳಾಗಿ ಮೆರೆದರು. ಅವರನ್ನು ಕಂಡು ಒಡನಾಟಗೈದವರು ಎಂದೂ ಅವರನ್ನು ಮರೆಯಲಾರರು. ಅವರ ಸೇವಾ ಮನೋಭಾವ, ಕಾರ್ಯತತ್ಪರತೆಯನ್ನು ಕಂಡವರು ಅವರನ್ನು ಕೊಂಡಾಡುವರು. ಅವರ ಕುರಿತು 'ಎಂದೂ ಮರೆಯಲಾಗದ ಪೈಲೂರು' ಎಂದು ನನ್ನೆದೆ ನುಡಿಯುತ್ತಿದೆ.

◆




**ರಾ.ಮೊ. ವಿಶ್ವಾಮಿತ್ರ**
ವಿವೇಕ ಸಾಹಿತ್ಯಮಾಲೆ
ಮಣ್ಣಗುಡ್ಡ 1ನೇ ಎ ಅಡ್ಡರಸ್ತೆ
ಮಂಗಳೂರು - 575 003






# ಪೈಲೂರು : ಮೃದು ಮಧುರ ವ್ಯಕ್ತಿತ್ವ

ವಿ.ಬಿ. ಹೊಸಮನೆ

7779

ಮಧು ಕ್ಷೌದ್ರಂ ಚ ಮಾಕ್ಷೀಕಂ ಮಾಕ್ಷಿಕಂ ಕುಸುಮಾಸವಂ
ಪುಷ್ಪಾಸವಂ ಸಾರಘಂ ಚ ಕಚ್ಚ ಪುಷ್ಪರಸಂ ಸ್ಮೃತಮ್

- ಧನ್ವಂತರಿ ನಿಘಂಟು

ಜೇನಿನ ಪರ್ಯಾಯ ಪದಗಳಾಗಿ ಮಧು, ಕ್ಷೌದ್ರ, ಮಾಕ್ಷಿಕ, ಕುಸುಮಾಸವ, ಪುಷ್ಪಾಸವ, ಸಾರಘ, ಪುಷ್ಪರಸ ಎಂಬ ಹೆಸರುಗಳನ್ನು ಧನ್ವಂತರಿ ನಿಘಂಟಿನಲ್ಲಿ ಹೇಳಿದೆ. ಜೇನು ಬಹೂಪಯೋಗಿ ಔಷಧೀಯ ಗುಣಗಳಿಂದ ಕೂಡಿದುದು. ಜೇನುವ್ಯವಸಾಯಗಾರರಾಗಿ ಜೀವನ ನಡೆಸಿದ ಪೈಲೂರು ಲಕ್ಷ್ಮೀನಾರಾಯಣ ರಾವ್ ಕೂಡ ಜೇನಿನಂತೆ ಮಧುರವಾಗಿ ಬದುಕಿದವರು. ಬಹುಮುಖ ಸೇವೆ ಮಾಡುತ್ತ ಸಮಾಜಕ್ಕೆ ತಮ್ಮನ್ನು ತಾವೇ ತೊಡಗಿಸಿಕೊಂಡವರು. ಅಡಿಕೆ ಬೆಳೆಗಾರರು, ಜೇನುವ್ಯವಸಾಯಗಾರರು, ಸಹಕಾರಿ ಸಂಘಟನೆಗಳು ರಾಯರನ್ನು ಮರೆಯುವುದು ಸಾಧ್ಯವೇ ಇಲ್ಲ. ಅವರು ಪ್ರೀತಿಯಿಂದ ನನಗೆ ನೀಡಿದ್ದ ಜೇನುವ್ಯವಸಾಯ ಪುಸ್ತಕವನ್ನೊಮ್ಮೆ ಓದಿದಾಗ ಕಣ್ಣು ಹನಿಗೂಡುತ್ತದೆ, ಮನಸ್ಸು ಆ ಕೀರ್ತಿಶರೀರ ದೊಡಗೂಡುತ್ತದೆ.

ಜೇನುಸಾಕಣೆ ಒಂದು ಹವ್ಯಾಸವಾಗಿ, ವೃತ್ತಿಯಾಗಿ ಬೆಳೆಯಬೇಕು; ಪ್ರತಿ ಶಾಲೆಯಲ್ಲೂ ಒಂದೆರಡು ಜೇನುಕುಟುಂಬಗಳನ್ನು ಗೂಡಿನಲ್ಲಿಟ್ಟು, ಸಾಕಿ ಅವುಗಳ ಚಟುವಟಿಕೆಗಳನ್ನು, ಸಹಕಾರ ಕ್ರಮಗಳನ್ನು ಮಕ್ಕಳು ನೋಡಿ ಕಲಿತುಕೊಳ್ಳುವಂತಿರಬೇಕು - ಇದು ಪೈಲೂರರ ಆಶಯವಾಗಿತ್ತು.

ಪೈಲೂರು ಲಕ್ಷ್ಮೀನಾರಾಯಣ ರಾಯರ ದಿನಚರಿಯನ್ನು ಹತ್ತಿರದಿಂದ ಕಂಡವರು ಅನೇಕರಿದ್ದಾರೆ. ಮಂಗಳೂರು-ಪುತ್ತೂರುಗಳಲ್ಲಿ ಅವರು ಭೇಟಿನೀಡದ ಕೃಷಿಕರ ಮನೆಗಳೇ ವಿರಳ ಎನ್ನಬಹುದು. ನಾನು ಮಂಗಳೂರಿಗೆ

ಬರುವ ಮೊದಲೇ ಪರಿಚಯವಾಗಿದ್ದ ವ್ಯಕ್ತಿ ಅವರು. ಖಾದಿಯ ಬಿಳಿ ಜುಬ್ಬ, ಖಾದಿ ಧೋತಿಯ ಕಚ್ಚೆ, ಮೊದಮೊದಲು ತಲೆಯ ಮೇಲೊಂದು ಗಾಂಧೀ ಟೊಪ್ಪಿಯೂ ಇರುತ್ತಿತ್ತು. ಉಡುಪಿನಷ್ಟೇ ಶುಭ್ರವಾದ ಮನಸ್ಸು.

**ಹಿರಿಯಣ್ಣನ ಖುಷಿ**

ಮಂಗಳೂರಿಗೆ ಬಂದವನು ನಾನು ಸ್ವಲ್ಪ ಸಮಯ ಉದಯ ಪ್ರಿಂಟರಿಯ ನಾರಾಯಣ ರಾಯರೊಂದಿಗೆ ಕರಡು ತಿದ್ದುವುದರಲ್ಲಿ ಸಹಕರಿಸುತ್ತಿದ್ದೆ. ಅಲ್ಲಿಗೆ ಲಕ್ಷ್ಮೀನಾರಾಯಣ ರಾಯರು ಆಗಾಗ ಬರುತ್ತಿದ್ದರು. ಅಲ್ಲೇ ಹತ್ತಿರದ ನವಭಾರತ ದಿನಪತ್ರಿಕೆಯ ಕಚೇರಿಯಲ್ಲಿ ವಾರದ ಪೇಟೆಧಾರಣೆ ಚರ್ಚಿಸುತ್ತಾ ಅಲ್ಲಿಯೂ ನಾವು ಭೇಟಿಯಾಗುತ್ತಿದ್ದೆವು. ಆಗತಾನೇ ಮಂಗಳೂರಿಗೆ ಪಿಟಿಐ ವಾರ್ತಾ ಸಂಸ್ಥೆಯ ಸಂಪರ್ಕ ದೊರಕಿತ್ತು. ಆ ಸಂದರ್ಭದಲ್ಲಿ (1951) ನವಭಾರತಕ್ಕೆ ಉಪ ಸಂಪಾದಕರ ಸ್ಥಾನಕ್ಕೆ ಅಭ್ಯರ್ಥಿಗಳ ಅಗತ್ಯವಿತ್ತು. ನಿರುದ್ಯೋಗಿಯಾಗಿದ್ದ ನನ್ನನ್ನು ರಾಯರು ನವಭಾರತದ ಕಾರ್ಯನಿರ್ವಾಹಕ ಸಂಪಾದಕ ಕೃಷ್ಣರಾಯರಿಗೆ ಪರಿಚಯ ಮಾಡಿಕೊಟ್ಟು, ನೇಮಕ ಮಾಡಿಸಿಯೂ ಬಿಟ್ಟರು. ಮುಂದೆ ನಾಲ್ಕಾರು ತಿಂಗಳಲ್ಲೇ ಉಡುಪಿಯ ಸಂಸ್ಕೃತ ಕಾಲೇಜಿಗೆ ಸೇರಿಕೊಳ್ಳುವ ಸಂದರ್ಭವೂ ಬಂತು. ಅದನ್ನವರಲ್ಲಿ ಹೇಳಿಕೊಂಡಾಗ ಬಹಳ ಸಂತೋಷಪಟ್ಟರು - ನನ್ನ ಹಿರಿಯಣ್ಣನಂತೆ!

ವಿಶೇಷ ಹಕ್ಕಿಯೊಂದು ಎಲ್ಲಿಂದಲೋ ಹಾರಿಬಂದರೆ ಅದರ ಪರಿಚಯ, ಆ ಕುರಿತು ಗೆಳೆಯರೊಂದಿಗೆ ವಿಚಾರ ವಿನಿಮಯ, ಕೃಷಿಕರಲ್ಲಿ ಯಾವುದಾದರೂ ಸಮಸ್ಯೆ ತಲೆದೋರಿದರೆ ಅದಕ್ಕೆ ಪರಿಹಾರ ಚಿಂತನೆ, ಬಂದರಲ್ಲಿ ಕೃಷ್ಯುತ್ಪನ್ನಗಳ ಮಾರಾಟದಲ್ಲಿ ಏರುಪೇರಾದರೆ ಸಂಧಾನ ಈ ಎಲ್ಲಧರೊಂದಿಗೆ ಜೇನುಸಾಕಣೆ, ಅಕ್ವೇರಿಯಂ ಮೀನುಸಾಕಣೆಯ ಹವ್ಯಾಸಗಳು.

ಮಂಗಳೂರಿನಲ್ಲಿ 24 ವರ್ಷಗಳ ಕಾಲ ನಿರಂತರ 'ರಾಷ್ಟ್ರಬಂಧು' ವಾರಪತ್ರಿಕೆಯ ಸಂಪಾದಕರಾಗಿ ಸೇವೆಸಲ್ಲಿಸುತ್ತಿದ್ದ ಕವಿ ಕಡೆಂಗೋಡ್ಲು ಶಂಕರ ಭಟ್ಟ ಅವರು ಆ ಪತ್ರಿಕೆಯನ್ನು ಬಿಟ್ಟು, 'ರಾಷ್ಟ್ರಮತ' ವಾರಪತ್ರಿಕೆ ಹುಟ್ಟುಹಾಕಿದರು. ವಾರದ ಮಾರುಕಟ್ಟೆ ವಿಚಾರ ವಿಮರ್ಶೆಗಾಗಿ ಪೈಲೂರು ಅವರಿಗೆ ಇನ್ನೊಂದು ಪತ್ರಿಕೆ ದೊರೆಯಿತು. ಜಿಲ್ಲೆಯ ಆರ್ಥಿಕ ಬೆಳೆಗಳಾಗಲೀ ಕಾಡುತ್ಪತ್ತಿಗಳಾಗಲೀ ಅವರ ಗಮನಸೆಳೆಯದಿರುತ್ತಿರಲಿಲ್ಲ. ವಿಶೇಷ ಹಕ್ಕಿಯೊಂದು ಎಲ್ಲಿಂದಲೋ ಹಾರಿಬಂದರೆ ಅದರ ಪರಿಚಯ, ಆ ಕುರಿತು ಗೆಳೆಯರೊಂದಿಗೆ ವಿಚಾರ ವಿನಿಮಯ, ಕೃಷಿಕರಲ್ಲಿ ಯಾವುದಾದರೂ ಸಮಸ್ಯೆ ತಲೆದೋರಿದರೆ ಅದಕ್ಕೆ ಪರಿಹಾರ ಚಿಂತನೆ, ಬಂದರಲ್ಲಿ ಕೃಷ್ಯುತ್ಪನ್ನಗಳ ಮಾರಾಟದಲ್ಲಿ ಏರುಪೇರಾದರೆ ಸಂಧಾನ, ಈ ಎಲ್ಲದರೊಂದಿಗೆ ಜೇನುಸಾಕಣೆ, ಅಕ್ವೇರಿಯಂ ಮೀನುಸಾಕಣೆಯ ಹವ್ಯಾಸಗಳು. ಅವರಿವರೆಂಬ ಭಾವನೆ, ಪ್ರತ್ಯೇಕತೆ ಅವರ ಬಳಿಗೆ ಸುಳಿಯದು. ಎಲ್ಲರೂ ನಮ್ಮವರೇ, ಎಲ್ಲವೂ ನಮ್ಮದೇ ಎಂಬ ಆತ್ಮೀಯ ಭಾವನೆಯ ದುಡಿಮೆ ಅವರದು. ಅವರೊಬ್ಬ ಶಿಸ್ತಿನ ಸಿಪಾಯಿ.

◆



**ವಿ.ಬಿ. ಹೊಸಮನೆ**
ಕಲಾದರ್ಶನ
ಕದಿರೆ
ಮಂಗಳೂರು - 575 002



# ನೆನೆದವರ ಮನದಲ್ಲಿ ಮಂಗಳೂರು ಅಜ್ಜ




– ಜಿ.ಎಸ್. ಉಬರಡ್ಕ

ನನ್ನ ಅಮ್ಮನಿಗೆ ಐವರು ಸೋದರ ಮಾವಂದಿರು. ಈ ಮಾವಂದಿರಿಗೆ ಇಬ್ಬರು ಅಕ್ಕಂದಿರು ಹಾಗೂ ಒಬ್ಬಳು ತಂಗಿ. ಈ ಅಕ್ಕ ತಂಗಿಯರ ಪೈಕಿ 'ದೊಡ್ಡಕ್ಕಯ್ಯ'ನೆಂದು ಕರೆಸಿಕೊಳ್ಳುತ್ತಿದ್ದ ದೇರಾಜೆ ಮೂಕಾಂಬಿಕೆ ಎಂಬವರ ದೊಡ್ಡ ಮಗಳು ಉಬರಡ್ಕ ಗಂಗಮ್ಮ - ನನ್ನ ಅಮ್ಮ. ಅಮ್ಮನ ಸೋದರ ಮಾವಂದಿರ ಪೈಕಿ ದೊಡ್ಡವರಿಬ್ಬರು ಸಣ್ಣ ಪ್ರಾಯದಲ್ಲೇ ನಿಧನರಾಗಿದ್ದರು. ಮೂರನೆಯವರಾದ ಪೈಲೂರು ಮಹಾಬಲೇಶ್ವರಯ್ಯ ಹಿರಿಯರಾಗಿದ್ದುದರಿಂದ, ಅನಿವಾರ್ಯವಾಗಿ ಮನೆಯ ವ್ಯವಹಾರ ಹಾಗೂ ಕೃಷಿ ಕೆಲಸಗಳ ಪೂರ್ಣ ಜವಾಬ್ದಾರಿಯನ್ನು ಅವರು ಹೊರಬೇಕಾಯಿತು. ಅವರ ಒತ್ತಿನ ತಮ್ಮ ಪೈಲೂರು ಲಕ್ಷ್ಮೀನಾರಾಯಣ ರಾಯರು ಬಿ.ಎ. ಪದವಿ ಮುಗಿಸಿ ಸಹಕಾರಿ ಕ್ಷೇತ್ರದಲ್ಲಿ ಉದ್ಯೋಗಿಯಾಗಿದ್ದರೆ, ಕೊನೆಯ ತಮ್ಮ ಪೈಲೂರು ಶಿವರಾಮಯ್ಯ ಸಾಂಪ್ರದಾಯಿಕ ವಿದ್ಯಾಭ್ಯಾಸದಲ್ಲಿ ಮುಂದುವರಿಯುವ ಬದಲು ಕೃಷಿಯನ್ನೇ ಪ್ರೀತಿಸಿ, ಅದರಲ್ಲೇ ಶ್ರದ್ಧೆಯಿಂದ ತೊಡಗಿಕೊಂಡವರಾಗಿದ್ದರು. ಇವರ ವಿಶೇಷ ಹವ್ಯಾಸಗಳಲ್ಲಿ ಜೇನುಸಾಕಣೆ, ಬೆಲ್ಲ ತಯಾರಿಕೆ, ಮಾವು, ಹಲಸು, ಅನನಾಸು ಮೊದಲಾದ ಹಣ್ಣುಗಳ ಮುರಬ್ಬಾ (Jam) ತಯಾರಿಕೆ ಪ್ರಧಾನವಾದುದಾಗಿತ್ತು. ಹುಲಿಬೇಟೆಯಲ್ಲೂ ಇವರು ನಿಪುಣರಾಗಿದ್ದರು.

ಈ ಮೂವರು ಅಣ್ಣ ತಮ್ಮಂದಿರ ವ್ಯಕ್ತಿತ್ವದ ನೂರೆಂಟು ಕತೆಗಳನ್ನು ನನಗೆ ಉಣಿಸಿದವರು ನನ್ನ ಅಮ್ಮ-ಉಬರಡ್ಕ ಗಂಗಮ್ಮ, ಖಾಸಾ ಅಜ್ಜಿ-ದೇರಾಜೆ ಮೂಕಾಂಬಿಕೆ, ಸಣ್ಣಜ್ಜಿ-ಅಂಬೆಕಲ್ಲು ಲಕ್ಷ್ಮಿ, ಖಾಸಾ ಚಿಕ್ಕಮ್ಮಂದಿರಾದ-ನೇಣಾರು ಲಕ್ಷ್ಮಿ ಹಾಗೂ ಮಕ್ಕಿಮನೆ ಗೌರಮ್ಮ. ಈ ಮೂವರು ಅಣ್ಣ ತಮ್ಮಂದಿರ ಪೈಕಿ ಶಿವರಾಮಯ್ಯ ತಮ್ಮ 29ರ ಪ್ರಾಯದಲ್ಲಿ 21.1.1944ರಂದು ನಿಧನರಾಗಿದ್ದರೆ, ಲಕ್ಷ್ಮೀನಾರಾಯಣ ರಾಯರು ತಮ್ಮ 91ರ ಪ್ರಾಯದಲ್ಲಿ 8.12.2002ರಂದು ನಿಧನರಾದರು. ಈಗ ಹಳೆಯ ತಲೆಮಾರಿನ ಕೊಂಡಿಯಂತಿರುವವರು ನಮ್ಮ ನಡುವೆ ಚುರುಕಿನಿಂದ ಓಡಾಡಿಕೊಂಡಿರುವ ಕೋಲು ಶರೀರದ 94ರ ವಯೋವೃದ್ಧ ಪೈಲೂರು ಮಹಾಬಲೇಶ್ವರಯ್ಯ, ಅವರ ತಂಗಿ 91ರ ವಯೋವೃದ್ಧೆ ಅಂಬೆಕಲ್ಲು ಲಕ್ಷ್ಮಿ ಮತ್ತು ಸೊಸೆ- 77ರ ವಯಸ್ಸಿನ ಮಕ್ಕಿಮನೆ ಗೌರಮ್ಮ.

## ಕುಡಿಯೊಡೆದ ಹವ್ಯಾಸಗಳು

ಈಗ ನಾನು ಹೇಳಲು ತೊಡಗಿರುವುದು ನನ್ನ ಮಂಗಳೂರು ಅಜ್ಜ ಪೈಲೂರು ಲಕ್ಷ್ಮೀನಾರಾಯಣ ರಾಯರ ವ್ಯಕ್ತಿತ್ವದ ಕುರಿತು. ಅಜ್ಜನ ಹುಟ್ಟೂರಿನ ಮನೆ ಸುಳ್ಯ ತಾಲೂಕಿನ (ಆಗಿನ ಪುತ್ತೂರು ತಾಲೂಕು) ಅಮರ ಮೂಡ್ನೂರು ಗ್ರಾಮದ ಪೈಲೂರು ಎಂಬಲ್ಲಿ ಇರುವುದಾದರೂ, ಅವರು ತಮ್ಮ ಉದ್ಯೋಗದ ನಿಮಿತ್ತ (ದಕ್ಷಿಣ ಕನ್ನಡ ಕೃಷಿಕರ ಸಹಕಾರಿ ಮಾರಾಟ ಸಂಘದ ಕಾರ್ಯದರ್ಶಿಯಾಗಿದ್ದರು) ಶಾಶ್ವತವಾಗಿ ನೆಲೆಸಿದ್ದು ಮಂಗಳೂರಿನಲ್ಲಿರುವ ತಮ್ಮ ಸ್ವಂತ ಮನೆಯಲ್ಲಿ. ಆದುದರಿಂದಲೇ ಅವರನ್ನು ನನ್ನ ಅಮ್ಮ 'ಮಂಗಳೂರು ಮಾವ'ನೆಂದು ಕರೆಯುತ್ತಿದ್ದರೆ, ನಾನು 'ಮಂಗಳೂರು ಅಜ್ಜ'ನೆಂದು ಕರೆಯುತ್ತಿದ್ದೆ.

ಈ ಅಜ್ಜ ತಮ್ಮ ತಾರುಣ್ಯದಲ್ಲಿ ಕೊಡಗು ಸರಕಾರ ನೇಮಿಸಿದ್ದ ಮೊದಲ ಜೇನು ಪರಿವೀಕ್ಷಕರಾಗಿದ್ದವರು. ಸದಭಿರುಚಿಯ ಅವರ ಬಹುಪಾಲು ಹವ್ಯಾಸಗಳೆಲ್ಲ ಮಂಗಳೂರು ಸೇರಿದ ನಂತರವೇ ಕುಡಿಯೊಡೆದವುಗಳೆಂದು ಅವರೊಮ್ಮೆ ನನ್ನಲ್ಲಿ ಹೇಳಿಕೊಂಡದ್ದುಂಟು. ಜೇನುಸಾಕಣೆಯೊಂದಿಗೆ ಹಕ್ಕಿ ಸಾಕಣೆ, ಬಣ್ಣದ ಮೀನುಗಳ ಸಾಕಣೆ, ಆರ್ಕಿಡ್ಸ್ ಸಂಗ್ರಹ ಮತ್ತು ಬೆಳೆಸುವಿಕೆ, ಹೂ ತೋಟಗಳ ನಿರ್ಮಾಣ, ರಾಕ್ ಗಾರ್ಡನಿಂಗ್, ಪರ್ವತಾರೋಹಣ, ಅಂಚೆಚೀಟಿಗಳ ಸಂಗ್ರಹವೇ ಮೊದಲಾದ ಎಂಥೆಂಥಾ ಹವ್ಯಾಸಗಳು ಅವರದು! ಎಂಥ ತರುಣನನ್ನೂ ನಾಚಿಸುವಂತಿದ್ದವು ಚಿಮ್ಮುತ್ತಿದ್ದ ಅವರ ಉತ್ಸಾಹದ ಚಿಲುಮೆ!

## ಆರ್ಕಿಡ್ಸ್ ಪ್ರಪಂಚ

ಆರ್ಕಿಡ್ಸ್ ಬೆಳೆಸುವಲ್ಲಿ ನನಗೆ ಆಸಕ್ತಿ ಹುಟ್ಟಲು 1965ರ ಏಪ್ರಿಲ್ ತಿಂಗಳ ಮೊದಲವಾರದಲ್ಲಿ ಮೊದಲ ಬಾರಿಗೆ ಅಜ್ಜನ ಜೊತೆಯಲ್ಲಿ ನಾನು ಚೊಕ್ಕಾಡಿಯ ಸಮೀಪದ ಬಂಟಮಲೆ ಬೆಟ್ಟವನ್ನು ಏರಿದ್ದೇ ಕಾರಣವಾಯಿತು. ಆಗಿನ್ನೂ ನನಗೆ 19ರ ವಯಸ್ಸು. ಆಗ ನನ್ನ ಹಾಗೆ ಇನ್ನೂ ಕೆಲವು ತರುಣರು ಜೊತೆಗಿದ್ದರು. ಅವರಲ್ಲಿ ಅಜ್ಜನ ಅಣ್ಣನ ಮಗ ಪೈಲೂರು ನಾರಾಯಣ ಎಂಬವರ ಹೊರತಾಗಿ ಉಳಿದವರು ಯಾರೆಂಬುದು ಅಷ್ಟಾಗಿ ನೆನಪಿಲ್ಲ ನನಗೆ. ಬಂಟಮಲೆಯನ್ನು ನಾವು ಏರುತ್ತಲಿದ್ದಂತೆ ಒಂದು ಕಡೆ ಅಜ್ಜ ಗಕ್ಕನೆ ನಿಂತವರೇ, 'ನೋಡಿ, ನೋಡಿ ಆರ್ಕಿಡ್' ಎಂದು ಖುಷಿಯಲ್ಲಿ ಯಾವುದೋ ಒಂದು ಮರದತ್ತ ಕೈತೋರಿಸಿದರು. ಅದೇನು



ಪೈಲೂರು ಲಕ್ಷ್ಮೀನಾರಾಯಣ ರಾವ್, ತಂಗಿ ಲಕ್ಷ್ಮೀ, ಅಣ್ಣ ಪೈಲೂರು ಮಹಾಬಲೇಶ್ವರಯ್ಯ.

ವೈಲ್ಡ್ ಆರ್ಕಿಡ್ಸ್ : ಅಜ್ಜನ ಆಸಕ್ತಿ.

ಹಕ್ಕಿಯೋ, ಕೀಟವೋ ಎಂದು ನಮಗೆ ಒಂದು ಚೂರೂ ಹೊಳೆಯದೆ ಅವರ ಮುಖವನ್ನೇ ಮಿಕಿಮಿಕಿ ನೋಡಿದೆವು. ನಮ್ಮ ದಡ್ಡತನ ಅವರಿಗೆ ಅರ್ಥವಾಗಿರಬೇಕು. 'ಅಲ್ಲಿ ನೋಡಿ, ಆ ಜೀಟೆ ಮರದಲ್ಲಿ ನೇತಾಡುತ್ತಿದೆಯಲ್ಲ ಹೂಗಳ ಗೊಂಚಲು ಹೊತ್ತು - ಅದೇ ಆರ್ಕಿಡ್' ಎಂದರು ನಗುತ್ತ. ಹೂ ಬಿಟ್ಟ ಆ ಅಪ್ಪುಸಸ್ಯ ಕಾಡಲ್ಲಿ ಹಲವು ಬಾರಿ ನಾನು ಕಂಡಿದ್ದ 'ದ್ರೌಪದಿ ಮಾಲೆ' (Rhyncostylis Retusa)ಯಾಗಿತ್ತು. ಸಸ್ಯಶಾಸ್ತ್ರದ ವಿದ್ಯಾರ್ಥಿಗಳಂತಿದ್ದ ನಮಗೆ ಈ ಅಜ್ಜ ಆರ್ಕಿಡ್ಸ್‌ನ ಹೊಸ ಪ್ರಪಂಚವನ್ನೇ ತೆರೆದು ತೋರಿಸಿದರು. ಆರ್ಕಿಡ್ಸುಗಳ ವಿಚಾರದಲ್ಲಿ ಅವರ ಆಸಕ್ತಿ, ತಿಳಿವಳಿಕೆ ಅಗಾಧವಾದುದಾಗಿತ್ತು. ಬೆಟ್ಟದಿಂದ ಇಳಿಯುವ ವೇಳೆಗೆ ಆರ್ಕಿಡ್ಸ್ ಹುಚ್ಚು ನನಗೆ ಬಲವಾಗಿ ಅಂಟಿಕೊಂಡುಬಿಟ್ಟಿತ್ತು. ನನ್ನ ಆಸಕ್ತಿ ಆರ್ಕಿಡ್ಸ್ ಸಂಗ್ರಹಿಸಿ ಬೆಳೆಸುವುದರತ್ತಲೇ ಇದೆಯೆಂಬುದನ್ನು ಮನಗಂಡ ಅವರು, ಆ ಹಾದಿಯ ಕಡೆಗೇ ಸಾಗುವಂತೆ ನನ್ನ ಬೆನ್ನು ತಟ್ಟಿದರು. ಅವರು ನನಗೆ ಪ್ರೀತಿಯಿಂದ ನೀಡಿದ B.N. Ghose ಇಂಗ್ಲಿಷ್‌ನಲ್ಲಿ ಬರೆದ ಪುಸ್ತಕ 'Beautiful Indian Orchids' ತುಂಬಾ ಅಮೂಲ್ಯವಾದದ್ದು. 1944ರಲ್ಲಿ ಪ್ರಕಟವಾದ, ಅಜ್ಜ ಕನ್ನಡದಲ್ಲಿ ಬರೆದ 'ಜೇನಿನ ವ್ಯವಸಾಯ'ವೆಂಬ ಅತ್ಯುಪಯುಕ್ತವಾದ ಕೈಪಿಡಿ ಮತ್ತು ಬಣ್ಣದ ಮೀನು ಸಾಕಣೆಯ ಕುರಿತು ಇಂಗ್ಲಿಷ್‌ನಲ್ಲಿ ಬರೆದ 'Ornamental Fish For Aquarium' ಎಂಬ ಸುಂದರ, ಸಚಿತ್ರ ಮಾರ್ಗದರ್ಶಕ ಕೈಪಿಡಿ, ಇಂಗ್ಲಿಷ್ ಮತ್ತು ಕನ್ನಡ ಈ ಎರಡೂ ಭಾಷೆಗಳಲ್ಲಿ ಅಜ್ಜನಿಗೆ ಅಪಾರ ಪ್ರೌಢಿಮೆಯಿತ್ತೆಂಬುದಕ್ಕೆ ಸಾಕ್ಷಿ.

ಸಕಲೇಶಪುರದ ಕ್ಯಾಮನಹಳ್ಳಿ, ರಕ್ಷಿದಿ, ಬೆಳ್ಳೇಕೆರೆ, ಮಾವಿನಕೂಲು, ಬಾವಲಿಮೂಲೆ ಇವೇ ಮೊದಲಾದ ಹಳ್ಳಿಗಳ ಕಾಡುಗಳಲ್ಲಿ; 'ಹಾರ್ಲೆ' ಮತ್ತು 'ಪೂರ್ಣಿಮಾ' ಕಾಫಿ ಎಸ್ಟೇಟುಗಳಲ್ಲಿ ಬಗೆಬಗೆಯ ವೈಲ್ಡ್ ಆರ್ಕಿಡ್ಸ್ ಹೇರಳವಾಗಿ ದೊರೆಯುತ್ತವೆಯೆಂದು ಅಜ್ಜನಿಗೆ ನಾನೊಮ್ಮೆ ತಿಳಿಸಿದ್ದೇ ತಡ, ಅವರು ತಮ್ಮ ಕಾರಿನಲ್ಲಿ ನನ್ನನ್ನು ಕರೆದುಕೊಂಡು ಹೊರಟೇಬಿಟ್ಟರು. ರಕ್ಷಿದಿ ಎಂಬಲ್ಲಿ ನನ್ನ ಖಾಸಾ ಚಿಕ್ಕಮ್ಮನ ಮನೆಯಿದ್ದುದರಿಂದ, ತಿರುಗಾಟಕ್ಕೆ ಅದೊಂದು ಕೇಂದ್ರ ಸ್ಥಾನದಂತಿತ್ತು. ಅಲ್ಲಿದ್ದ ನನ್ನ ಚಿಕ್ಕಮ್ಮನ ಮಗ (ತಮ್ಮ) ಪ್ರಸಾದ್ ರಕ್ಷಿದಿಗೆ ಈ ನಮ್ಮ ಹವ್ಯಾಸದ ರುಚಿಯೂ ಒಂದಷ್ಟು ಅಂಟಿಕೊಂಡುಬಿಟ್ಟಿತ್ತು. ಅವನ ನೆರವಿನಿಂದ ನಾವು ಅಲ್ಲಿ ಎಲ್ಲ ಕಡೆ ಸುತ್ತಾಡಿ, ಮರಗಿಡಗಳಿಂದ ಹೇರಳವಾಗಿ ವೈಲ್ಡ್ ಆರ್ಕಿಡ್ಸ್ ಸಂಗ್ರಹಿಸಿ ತಂದೆವು. ಅಜ್ಜನ ಜೊತೆ ಪಿಕ್‌ನಿಕ್‌ಗೆ ಹೋಗಿಬಂದಂತಿತ್ತು ಸಕಲೇಶಪುರದ ಈ ನನ್ನ ಪ್ರವಾಸದ ರಸಾನುಭವ.

ಮಂಗಳೂರು ಅಜ್ಜನ ಮನೆಯಲ್ಲೊಂದು ಕಸಿ ಮಾವಿನ ಮರವಿದೆ. ಈ ಮರದಲ್ಲಿ ಆರ್ಕಿಡ್ಸ್ ಇವೆ. ಈ ಮರದ ಸುತ್ತಲೂ ಅಲ್ಲಲ್ಲಿ ಗುಲಾಬಿ, ದಾಸವಾಳ ಮೊದಲಾದ ಹೂ ಗಿಡಗಳಿವೆ; ಕ್ರೋಟನ್ ಗಿಡಗಳಿವೆ. ಒಂದು ಬದಿಗೆ ಚಿಕ್ಕು (ಸಪೋಟ) ಹಣ್ಣಿನ ಗಿಡವಿದೆ. ಮನೆಗೆ ಹೊಂದಿಕೊಂಡಂತೆ ಕೋಳೆ ಹೂಗಳಿರುವ (Water Lily) ಸಿಮೆಂಟಿನ ಟ್ಯಾಂಕುಗಳಿವೆ; ಅವುಗಳಲ್ಲಿ ಬಣ್ಣದ ಮೀನುಗಳೂ ಇವೆ. ಇಲ್ಲಿರುವ ಈ ಕಸಿ ಮಾವಿನ ಮರದಲ್ಲಿ ಹಣ್ಣಾದಾಗ ನೋಡಬೇಕು ಅದರ ಚಂದ! ಮಾವಿನ ಮರವಿರುವ ಈ ಅಂಗಳವನ್ನು 'ಗಾರ್ಡನ್ನಂಗಳ' ಎನ್ನಬಹುದೇನೋ. ಇದ್ದ ಸಣ್ಣ ಜಾಗದಲ್ಲೇ ಅಷ್ಟೊಂದು ಸಸ್ಯಗಳು ತುಂಬಿವೆ. ಇದೇ ಅಂಗಳದಿಂದ ಹಿಂದೊಮ್ಮೆ ಒಂದು ರಾತ್ರಿ ಕಳ್ಳರು ಗುಲಾಬಿ ಗಿಡಗಳನ್ನು ಚಟ್ಟಿ ಸಮೇತ ಕದ್ದುಬಿಟ್ಟಿದ್ದರು. ಕಾಕತಾಲೀಯವೆಂಬಂತೆ ಹಾಗೆ ಕಳವಾದ ಮರುದಿನ ಬೆಳಗ್ಗೆ ನಾನು ಅಜ್ಜನ ಮನೆಗೆ ಹೋಗಿದ್ದೆ. ಅಜ್ಜ ನನ್ನನ್ನು ಕಂಡವರೇ ಕಳವಾದ ಸಂಗತಿ ವಿವರಿಸುತ್ತ ತುಂಬಾ ನೋವಿನಿಂದ, 'ಕಳ್ಳರು ಈ ಗುಲಾಬಿ ಗಿಡಗಳ ಬದಲಿಗೆ ನನ್ನನ್ನಾದರೂ ಹೊರಬಹುದಿತ್ತು ಮಾರಾಯ' ಎಂದು ಉದ್ಗಾರವೆಳೆದದ್ದು ಈಗಲೂ ನನಗೆ ನೆನಪಾಗುತ್ತಿದೆ.

**ಸ್ವರ್ಣಫಲ!**

ಪ್ರತಿ ವರ್ಷ ಗೋಕರ್ಣದ ಶಿವರಾತ್ರಿಗೆ ಹೋಗಿ ಬರುತ್ತಿದ್ದ ನನ್ನ ಅಪ್ಪ, ಆ ಸಮಯದಲ್ಲಿ ಮತ್ತು ಕೃಷಿಕರ ಸಹಕಾರಿ ಮಾರಾಟ ಸಂಘದಿಂದ ಮಾರಾಟವಾದ ಅಡಿಕೆಯ ಹಣವನ್ನು ತರುವ ಸಂದರ್ಭದಲ್ಲಿ ಮಂಗಳೂರು ಅಜ್ಜನ ಮನೆಗೆ ತಪ್ಪದೆ ಹೋಗಿಬರುತ್ತಿದ್ದರು. ಕೆಲವೊಮ್ಮೆ ಅಮ್ಮನನ್ನೂ ಕರೆದುಕೊಂಡು ಹೋದದ್ದುಂಟು. ಐದಾರು ವರ್ಷಗಳ ಸಣ್ಣವನಿದ್ದಾಗ ಒಂದೆರಡು ಸಲ ಅವರ ಜೊತೆಯಲ್ಲಿ, ನಾಲ್ಕೈದು ಸಲ ನನ್ನ ಅಜ್ಜಿ(ಅಮ್ಮನ ಅಮ್ಮ ಹಾಗೂ ಮಂಗಳೂರು ಅಜ್ಜನ ದೊಡ್ಡ ಅಕ್ಕ)ಯ ಜೊತೆಯಲ್ಲಿ ನಾನು ಅಜ್ಜನ ಮನೆಗೆ ಹೋಗಿಬಂದದ್ದುಂಟು. ಅಲ್ಲಿ ದೊಡ್ಡಮ್ಮ (ಅಜ್ಜನ ಹೆಂಡತಿ - ಅಜ್ಜಿ) ನನಗೆ ತಿನ್ನಲು ಕೊಟ್ಟ ಪರಿಮಳಭರಿತವಾದ ತುಂಬಾ ರುಚಿಯ ಹಣ್ಣೊಂದು ಅಜ್ಜಿಕತೆಯೊಂದರಲ್ಲಿ ವರ್ಣಿಸಿದ 'ಸ್ವರ್ಣಫಲ'ದಂತೆ ಕಂಡಿತ್ತು ನನಗೆ. ಇದು ಸೇಬು ಹಣ್ಣೆಂದು ಗೊತ್ತಾದದ್ದೇ ಆಗ ನನಗೆ.

ಮಂಗಳೂರು ಅಜ್ಜನ ಮನೆಯಲ್ಲೊಂದು ಕಸಿ ಮಾವಿನ ಮರವಿದೆ. ಈ ಮರದಲ್ಲಿ ಆರ್ಕಿಡ್ಸ್ ಇವೆ. ಈ ಮರದ ಸುತ್ತಲೂ ಅಲ್ಲಲ್ಲಿ ಗುಲಾಬಿ, ದಾಸವಾಳ ಮೊದಲಾದ ಹೂ ಗಿಡಗಳಿವೆ; ಕ್ರೋಟನ್ ಗಿಡಗಳಿವೆ. ಒಂದು ಬದಿಗೆ ಚಿಕ್ಕು ಹಣ್ಣಿನ ಗಿಡವಿದೆ. ಮನೆಗೆ ಹೊಂದಿಕೊಂಡಂತೆ ಕೋಳೆ ಹೂಗಳಿರುವ ಸಿಮೆಂಟಿನ ಟ್ಯಾಂಕುಗಳಿವೆ; ಅವುಗಳಲ್ಲಿ ಬಣ್ಣದ ಮೀನುಗಳೂ ಇವೆ. ಇಲ್ಲಿರುವ ಈ ಕಸಿ ಮಾವಿನ ಮರದಲ್ಲಿ ಹಣ್ಣಾದಾಗ ನೋಡಬೇಕು ಅದರ ಚಂದ!

ಚಿಕ್ಕವನಿದ್ದಾಗ ನಾನು ನೋಡಿದ, ಮೀಸೆಯಿಲ್ಲದ ಕೋಲುಮುಖದ, ಕೋಲುಶರೀರದ ಮಂಗಳೂರು ಅಜ್ಜ, ನಾನು ದೊಡ್ಡವನಾದಾಗಲೂ ಕೋಲಿನಂತೆಯೇ ಇದ್ದರು. ಆದರೆ ಈ ಕೋಲು ಬರೇ ಕೋಲಲ್ಲ, ಇದು ಕಬ್ಬಿನ ಕೋಲು. 'ಕಬ್ಬಿನ ಗಣೆ ಡೊಂಕು, ಅದರ ಹಾಲದು ಡೊಂಕೆ / ರಸಿಕಾ ಪೇಳೊ!' ಎಂದು ಕವಿ ಬೇಂದ್ರೆಯವರು ತಮ್ಮ ಕವಿತೆಯಲ್ಲಿ ವರ್ಣಿಸಿದ್ದು ಇಂಥವರನ್ನು ಕಂಡೇ ಇರಬೇಕು.

ವೃತ್ತಿ-ಪ್ರವೃತ್ತಿಗಳಲ್ಲಿ ಅಜ್ಜನ ಅಪಾರ ಶ್ರದ್ಧೆ, ಪರಿಶ್ರಮ, ಸಾಧನೆಗಳ ಅರಿವಿದ್ದ; ಅಜ್ಜನ ವ್ಯಕ್ತಿತ್ವದಲ್ಲಿ ತ್ಯಾಗ ಮನೋಭಾವ, ನಿಷ್ಕಲ್ಮಶ ಸ್ನೇಹ, ತಿಳಿನಗೆಯ ಹಾಸ್ಯ, ಕನಸುಗಾರಿಕೆಗಳನ್ನು ಕಂಡಿದ್ದ ಶಿವರಾಮ ಕಾರಂತರು 'ರಾಯರ ನೆನಪು ಜೇನಿನಂತೆ ಸವಿ' ಎಂದು ಶ್ಲಾಘಿಸಿದ್ದು ಸಹಜವೇ ಆಗಿದೆ. ಕಾರಂತರಿಗೂ ಅಜ್ಜನಿಗೂ ಪರಸ್ಪರ ಪ್ರೀತಿಯಿತ್ತು, ಅಭಿಮಾನವಿತ್ತು. ಅಷ್ಟೇ ಸಲುಗೆಯೂ ಇತ್ತು. ಕಾರಂತರ ಸಲುಗೆ ಎಷ್ಟಿತ್ತೆಂದರೆ, ಅಜ್ಜನ ಹವ್ಯಾಸಗಳ ಕುರಿತಾಗಿಯೇ ಒಮ್ಮೆ ಹಾಸ್ಯದ ಚಟಾಕಿ ಹಾರಿಸುತ್ತ, 'ಲಕ್ಷ್ಮೀನಾರಾಯಣ ರಾಯರೇ,



ನಿಮ್ಮ ಜೇನು ಸಾಕಣೆ, ಹಕ್ಕಿ ಸಾಕಣೆ, ಮೀನು ಸಾಕಣೆ - ಮತ್ತೆ ಹೇನು ಸಾಕಣೆ ಎಲ್ಲಿಯವರೆಗೆ ಬಂತೋ' ಎನ್ನುತ್ತಲೇ, 'ಪರಮೇಶ್ವರಿಯಮ್ಮ ನನಗೊಂದು ಲೋಟ ಫಸ್ಟ್‌ಕ್ಲಾಸ್ ಕಾಫಿ ಕೊಡಿ ನೋಡುವ' ಎಂದು ದೊಡ್ಡಮ್ಮನಲ್ಲಿ (ಅಜ್ಜನ ಹೆಂಡತಿ) ಹೇಳಿದ್ದನ್ನು ಅಜ್ಜ ನನ್ನಲ್ಲಿ ಒಮ್ಮೆ ನಗುತ್ತಲೇ ತಿಳಿಸಿದ್ದರು.

**ದೀರ್ಘಾಯುಷ್ಯದ ಗುಟ್ಟು**

ನಾನು ಚಿಕ್ಕವನಿದ್ದಾಗ ಶೀತಕ್ಕೋ, ಕೆಮ್ಮಿಗೋ ಮದ್ದಿನ ಜೊತೆ ಜೇನು ಬೆರೆಸಿ ನೆಕ್ಕಲು ಕೊಡುತ್ತಿದ್ದಳು ಅಮ್ಮ. ಹೀಗಾಗಿ ಆ ಕಾಲದಲ್ಲಿ ಜೇನನ್ನು ಹಾಗೇ ತಿಂದು ಗೊತ್ತೇ ಇರಲಿಲ್ಲ ನನಗೆ. ಜೇನು ದೇಹದ ಆರೋಗ್ಯಕ್ಕೆ ತುಂಬಾ ಯೋಗ್ಯವಾದ ಪೇಯವೆಂದು ಅಜ್ಜನಿಂದಲೇ ನನಗೆ ತಿಳಿದದ್ದು. ದೊಡ್ಡಮ್ಮ ನನಗೆ ಸೇಬು, ಮಾವಿನ ಹಣ್ಣುಗಳನ್ನು ತಿನ್ನಲು ಕೊಟ್ಟಂತೆ, ಅಜ್ಜ ನನಗೆ ಒಂದೆರಡು ಚಮಚ ಜೇನು ನೆಕ್ಕಲು ಕೊಡುತ್ತಿದ್ದರು. ಅಜ್ಜನ ದೃಷ್ಟಿಯಲ್ಲಿ ಜೇನೆಂದರೆ ಅಮೃತ. ಆಯುಷ್ಯ ವೃದ್ಧಿಗೆ ಜೇನೇ ಮೊದಲ ಸೋಪಾನವೆಂದು ನಂಬಿ ಬಾಳಿದವರು ಅವರು. ಅವರ ದೀರ್ಘಾಯುಷ್ಯದ ಗುಟ್ಟು ಜೇನಲ್ಲೇ ಇತ್ತೇನೋ.



ಮನೆಯ ಕೈತೋಟದಲ್ಲಿ ಅಜ್ಜ ಪಪ್ಪಾಯಿ ಕೊಯ್ಯುತ್ತಿರುವುದು.

ರೆವರೆಂಡ್ ಎಲ್.ಎಲ್. ಲ್ಯಾಂಗ್‌ಸ್ತ್ರಾತ್ (1810-1895) ಅಮೆರಿಕದ ಜೇನು ಕೃಷಿಕರ ಸಂಘಕ್ಕೆ ಬಹಳ ಕಾಲ ಅಧ್ಯಕ್ಷನಾಗಿದ್ದವ. 'ಲ್ಯಾಂಗ್‌ಸ್ತ್ರಾತ್ ಅಂಡ್ ದ ಹೈವ್ ಅಂಡ್ ದ ಹನಿಬೀ' ಎಂಬುದು ಜೇನಿನ ವ್ಯವಸಾಯದ ಕುರಿತಾಗಿ ಅವನು ಬರೆದ ವಿಶ್ವಪ್ರಸಿದ್ಧ ಗ್ರಂಥ. ಅವನು ಒಳ್ಳೆಯ ಬರಹಗಾರ, ವಾಗ್ಮಿ, ವಾತ್ಸಲ್ಯಮಯಿ, ಮಾನವತಾವಾದಿ, ಕವಿ, ವಿಜ್ಞಾನಿ, ತತ್ವಜ್ಞಾನಿ ಎಲ್ಲವೂ ಆಗಿದ್ದನೆಂದು ಏಮೋಸ್ ಐವೆಸ್ ರೂಟ್ (1839-1923) ತನ್ನ ನೆನಪುಗಳ ಬರೆಹದಲ್ಲಿ ನೆನಪಿಸಿಕೊಂಡಿದ್ದಾನೆ. ಅಮೆರಿಕದಲ್ಲಿ ಜೇನುಕೃಷಿಯನ್ನು ಜನಪ್ರಿಯಗೊಳಿಸಿದವರಲ್ಲಿ ಅಗ್ರಗಣ್ಯನಾದವನು ಈ ರೂಟ್. ಇವನ 'ಎಬಿಸಿ ಆಫ್ ಬೀ ಕಲ್ಚರ್' (1877) ಎಂಬ ಪ್ರಸಿದ್ಧ ಗ್ರಂಥ ಜೇನು ಸಾಹಿತ್ಯದಲ್ಲೇ ಅತ್ಯಮೂಲ್ಯವಾದದ್ದು. ರೂಟ್ ವರ್ಣಿಸಿದ ಲ್ಯಾಂಗ್‌ಸ್ತ್ರಾತ್‌ನ ಗ್ರಂಥದ ಸಾರವನ್ನು ಹೀರಿದ ಅಭಿನವ ಲ್ಯಾಂಗ್‌ಸ್ತ್ರಾತ್ ನಂತೆ ಕಂಡಿದ್ದಾರೆ ನನಗೆ ನನ್ನ ಅಜ್ಜ ಪೈಲೂರು ಲಕ್ಷ್ಮೀನಾರಾಯಣ ರಾಯರು.

**ಬಿಳಿ ಮುಜಂಟಿಯ ಧ್ಯಾನ**

ಅಜ್ಜ ಸಾಯುವುದಕ್ಕೆ ನಾಲ್ಕೈದು ತಿಂಗಳ ಮೊದಲು, ಗೆಳೆಯ ಎಂ.ಜಿ. ಕಜೆಯ ಜೊತೆಯಲ್ಲಿ ಅಜ್ಜನನ್ನು ಕಂಡುಬಂದಿದ್ದೆ. ವೃದ್ಧಾಪ್ಯದ ಕಾಯಿಲೆಗಳಿಂದ ತೀವ್ರ ಅಸ್ವಸ್ಥರಾಗಿ ಒಳಕೋಣೆಯಲ್ಲಿ ಮಲಗಿದ್ದ ಅವರು, ನಮ್ಮನ್ನು ಕಂಡವರೇ ಹಸನ್ಮುಖರಾದರು. ಅವರ ಮಾತಿನ ತೊಡಗುವಿಕೆಯೆ ಜೇನ್ನೊಣದ ಕುರಿತಾಗಿತ್ತು. ಅದರಲ್ಲೂ ಬಿಳಿ ಮುಜಂಟಿ (ಮುಜಂಟಿ - Dammer Bee - ನೊಣದಲ್ಲೇ ತೀರಾ ವಿರಳವಾದ ಪ್ರಭೇದ)ಯ ಧ್ಯಾನದಲ್ಲೇ ಅವರು ಇರುವಂತೆ ತೋರುತ್ತಿತ್ತು. ಬಿಳಿ ಜಾತಿಯ ಮುಜಂಟಿಯನ್ನು ನಾವೂ ಕಂಡಿದ್ದೇವೆಂದು

ತಿಳಿಸಿದಾಗ ಅವರಿಗಾದ ಆನಂದ ಅಷ್ಟಿಷ್ಟಲ್ಲ. ಮತ್ತೆ ಅವರ ಮಾತು ಆರ್ಕಿಡ್, ಗಾರ್ಡನಿಂಗ್, ಪರ್ವತಾರೋಹಣಗಳ ಕಡೆಗೂ ಹೊರಳಿತು. ಮಂಚದ ಮೇಲೆ ಹಾಸಿಗೆಯಲ್ಲಿ ಗೋಡೆಗೊರಗಿ ಕೂತು ಅವರು ಮಾತಾಡುತ್ತಲೇ ಇದ್ದರು. ಹೊತ್ತಾಯಿತೆಂದು ನಾವು ಏಳಲು ಹೊರಟರೆ, ಅವರೂ ಏಳಲು ಪ್ರಯತ್ನಿಸಿದರು. 'ನೀವು ಮಲಗಿಕೊಳ್ಳಿ, ಆಯಾಸವಾದೀತು' ಎಂದರೂ ಕೇಳದೆ, ಅಲ್ಲೇ ಇದ್ದ ನರ್ಸೊಬ್ಬಳ (ಅವರ ಶುಶ್ರೂಷೆಗೆಂದು ನೇಮಿಸಿದ್ದ ನರ್ಸ್) ಸಹಕಾರದಿಂದ ಕಾಲೆಳೆಯುತ್ತಾ ಹೊರಗೆ ಬಂದು ಕುರ್ಚಿಯಲ್ಲಿ ಕೂತರು. ತಲೆಬಗ್ಗಿಸಿ ನಮಸ್ಕರಿಸಿದ ನಮ್ಮ ತಲೆಯ ಮೇಲೆ ಮೆತ್ತಗೆ ಕೈಯಾಡಿಸಿದ ಅವರು 'ಹೋಗಿ ಬನ್ನಿ' ಎಂದು ಸಣ್ಣಗೆ ನಕ್ಕು ಕೈಬೀಸಿದರು.



ಮಂಗಳೂರು ಅಜ್ಜ ನಿಧನರಾದ ಸುದ್ದಿ ನನಗೆ ತಲುಪಿದಾಗ - ಯಾವುದೋ ಲೋಕದಿಂದ ಭೃಂಗದ ಬೆನ್ನೇರಿ ಬಂದ ಈ ಕಲ್ಪನಾ ವಿಲಾಸಿ, ಹೂವಿನಿಂದ ಹೂವಿಗೆ ಹಾರಾಡುವ ಜೇನ್ನೊಣದಂತೆ ನಮ್ಮ ನಡುವೆ ಸದಭಿರುಚಿಯ ಬಗೆಬಗೆಯ ಹವ್ಯಾಸಗಳ ಬೀಜ ಬಿತ್ತುತ್ತಲಿದ್ದವರು, ತಟ್ಟನೆ ಯಾವುದೋ ಕರೆಯ ಸೆಳೆತಕ್ಕೆ ಒಳಗಾದವರಂತೆ ಮತ್ತೆ ಅದೇ ಲೋಕಕ್ಕೆ ಹಾರಿ ಮರೆಯಾಗಿ ಹೋದಂತೆ ಭಾಸವಾಯಿತು.

ಅಜ್ಜನ ಮನೆಯ ಕೆಳಗೆ ವ್ಯಾಸರಾವ್ ರಸ್ತೆಗೆ ಇಳಿಯುತ್ತಿದ್ದಂತೆ ಯಾಕೋ ಗಂಟಲು ಕಟ್ಟಿದಂತಾಗಿ, ಕನ್ನಡಕವನ್ನು ಕರ್ಚೀಪಿನಲ್ಲಿ ಉಜ್ಜಿಕೊಳ್ಳುವ ನೆಪದಲ್ಲಿ ಮೆಲ್ಲಗೆ ಕಣ್ಣೀರನ್ನು ಒರಸಿಕೊಂಡೆ. ಹಿಂದೆ ತಿರುಗಿ ಅಜ್ಜನ ಮನೆ, ಅವರ ಮನೆಯಂಗಳದ ಮಾವಿನ ಮರ - ಮುಂತಾದವುಗಳ ಮೇಲೆ ಒಮ್ಮೆ ಕಣ್ಣಾಡಿಸಿ, ಕಜೆಯ ಜೊತೆ ಬೈಕ್ ಹತ್ತಿದೆ. ನಮ್ಮ ಈ ಭೇಟಿಯ ಸಂದರ್ಭದಲ್ಲಿ ಅಜ್ಜ ಮಾನಸಿಕವಾಗಿ ಆಗಲೇ ತಮ್ಮ ಬದುಕಿಗೆ ವಿದಾಯ ಕೋರಿದ್ದರೆಂದು ನಮಗಾಗ ಅರಿವಾಗಿರಲೇ ಇಲ್ಲ.

ಮಂಗಳೂರು ಅಜ್ಜ ನಿಧನರಾದ ಸುದ್ದಿ ನನಗೆ ತಲುಪಿದಾಗ - ಯಾವುದೋ ಲೋಕದಿಂದ ಭೃಂಗದ ಬೆನ್ನೇರಿ ಬಂದ ಈ ಕಲ್ಪನಾ ವಿಲಾಸಿ, ಹೂವಿನಿಂದ ಹೂವಿಗೆ ಹಾರಾಡುವ ಜೇನ್ನೊಣದಂತೆ ನಮ್ಮ ನಡುವೆ ಸದಭಿರುಚಿಯ ಬಗೆಬಗೆಯ ಹವ್ಯಾಸಗಳ ಬೀಜ ಬಿತ್ತುತ್ತಲಿದ್ದವರು, ತಟ್ಟನೆ ಯಾವುದೋ ಕರೆಯ ಸೆಳೆತಕ್ಕೆ ಒಳಗಾದವರಂತೆ ಮತ್ತೆ ಅದೇ ಲೋಕಕ್ಕೆ ಹಾರಿ ಮರೆಯಾಗಿಹೋದಂತೆ ಭಾಸವಾಯಿತು.

ನಕ್ಕಂತೆ ಇದ್ದಾರೆ ಈಗಲೂ ಮಂಗಳೂರು ಅಜ್ಜ - ಅರಳಿದ ಹೂಗಳಲ್ಲಿ, ಜೇನ್ನೊಣಗಳ ಝೇಂಕಾರದಲ್ಲಿ, ಪಕ್ಕಿಗಳ ಕಲವರದಲ್ಲಿ, ಬಣ್ಣದ ಮೀನುಗಳ ಕಣ್ಣುಗಳಲ್ಲಿ, ಅಂಗಳದ ಮಾಮರದಲ್ಲಿ, ನೆನೆದವರ ಮನದಲ್ಲಿ.

◆



ಜಿ.ಎಸ್. ಉಬರಡ್ಕ
'ಕಾರ್ತಿಕ'
ಅಂಚೆ : ದೊಡ್ಡತೋಟ
ದಕ್ಷಿಣ ಕನ್ನಡ - 574 248



ಮನೆಯಂಗಳದ ಈ ಮಾವಿನ ಮರದಡಿ ಅಜ್ಜ.

# ಕಾರಿನಲ್ಲಿ ಬಂದಿಳಿದ ಮಂಗಳೂರು ಅಜ್ಜ

- ಪ್ರಸಾದ್ ರಕ್ಷಿದಿ

'ಮಂಗಳೂರಜ್ಜಯ್ಯ' ನನ್ನಮ್ಮನ ಸೋದರಮಾವ. ಅಮ್ಮನಿಗೆ ಅವರು 'ಮಂಗ್ಳೂರ್ ಮಾವಯ್ಯ'. ನಾನು ಅಜ್ಜನನ್ನು ಕಂಡದ್ದಕ್ಕಿಂತ ಕೇಳಿದ್ದೇ ಹೆಚ್ಚು. ಜೀವನೋಪಾಯಕ್ಕೆಂದು ಅಪ್ಪ ಕೊಡಗನ್ನು ಬಿಟ್ಟು ಸಕಲೇಶಪುರ ಸೇರಿದ ಮೇಲೆ ನಾವು ಬಂಧು ಬಳಗದವರಿಂದೆಲ್ಲ ದೂರವಾಗಿ ಅಜ್ಞಾತವಾಸದಲ್ಲಿದ್ದೆವು. ಹಾಗಾಗಿ ನನಗೆ ಹೆಚ್ಚಿನ ಎಲ್ಲ ಸಂಬಂಧಿಗಳ ನೆನಪು ಅಮ್ಮನ ಕಥೆಗಳ ಮೂಲಕವೇ.

ದೊಡ್ಡ ದನಿಯ, ಊರೆಲ್ಲ ಉಸ್ತುವಾರಿ ಯಜಮಾನಿಕೆ ನಡೆಸುತ್ತಿದ್ದ 'ದೊಡ್ಡ ಮಾವಯ್ಯ' (ಪೈಲೂರು ಮಹಾಬಲೇಶ್ವರಯ್ಯ), ರೋಚಕ ಕತೆಗಳ ಹುಲಿಶಿಕಾರಿ ಸಾಹಸಿ 'ಪುಟ್ಟು ಮಾವಯ್ಯ' (ಪೈಲೂರು ಶಿವರಾಮಯ್ಯ) ಇವರಿಬ್ಬರ ಕತೆಗಿಂತ ಭಿನ್ನವಾಗಿ ವರ್ಣನೆಗೊಳ್ಳುತ್ತಿದ್ದವರು 'ಅಜ್ಜ' ಅರ್ಥಾತ್ 'ಮಂಗ್ಳೂರ್ ಮಾವಯ್ಯ'.

**ಜೇನಿನ ಕೆಲಸ - ಅಡಿಕೆ ವ್ಯಾಪಾರ**

ನನ್ನಮ್ಮನ ಮದುವೆಗೆ ಮುಂಚೆಯೇ ನನ್ನಪ್ಪನಿಗೆ ಅಜ್ಜನ ಪರಿಚಯವಿತ್ತಂತೆ. ಅಪ್ಪ ಆಗ ವಿರಾಜಪೇಟೆಯಲ್ಲಿದ್ದರು. ಆಗ ಅಜ್ಜನಿಗೆ ಜೇನಿನ ಕೆಲಸ ಇತ್ತೆಂದು ಅಮ್ಮ ಹೇಳಿದ್ದಳು. ಇದೆಲ್ಲ ಕತೆಗಳನ್ನು ಕೇಳುತ್ತಿದ್ದಾಗ ನಾನಿನ್ನೂ ಆರನೇ ತರಗತಿಯ ಹುಡುಗ. ಆಗ ಅಪ್ಪ ಕೆಲಸ ಮಾಡುತ್ತಿದ್ದ ಕಾಫಿ ತೋಟದಲ್ಲಿ ಆಳುಗಳು ಮರದಲ್ಲೋ ಹುತ್ತದಲ್ಲೋ ಕಟ್ಟಿರುತ್ತಿದ್ದ ಜೇನನ್ನು ಹೊಗೆ ಹಾಕಿ ಓಡಿಸಿ ಜೇನು ತೆಗೆಯುತ್ತಿದ್ದರು. ಕೆಲವೊಮ್ಮೆ ಮರದಮೇಲೆ ಎತ್ತರದಲ್ಲಿ ಕಟ್ಟಿದ್ದ ಹೆಜ್ಜೇನನ್ನು ರಾತ್ರೆ ಕತ್ತಲೆಯಲ್ಲೇ ಬೆಂಕಿ ಹಾಕಿ ಓಡಿಸಿ ಹಿಡಿಯುತ್ತಿದ್ದದ್ದೂ ಉಂಟು. ಇದು ಸ್ವಲ್ಪ ಸಾಹಸದ ಕೆಲಸ. ನಾನು ಸಾಧ್ಯವಾದಾಗಲೆಲ್ಲ ಈ ಆಳುಗಳ ಜೊತೆ ಓಡಾಡಿ ಜೇನುತುಪ್ಪದ ಸವಿಯನ್ನೂ ಜೇನು ಕಡಿತದ ರುಚಿಯನ್ನೂ ಕಂಡಿದ್ದೆ. ಈ ಆಳುಗಳು ಆಗಿಂದಾಗ್ಗೆ ಹೀಗೆ ಸುತ್ತಾಡುತ್ತಾ ಕೆಲಸಕ್ಕೆ ಸರಿಯಾಗಿ ಬರುತ್ತಿರಲಿಲ್ಲವಾದ್ದರಿಂದ ಅಪ್ಪನಿಂದ ಅಡ್ಡ ಕಸುಬಿಗಳು ಎಂದು ಬೈಸಿಕೊಳ್ಳುತ್ತಿದ್ದರು. ಹಾಗಾಗಿ ಅಮ್ಮ 'ಮಂಗ್ಳೂರ್ ಮಾವಯ್ಯನಿಗೆ ಜೇನಿನ ಕೆಲಸ' ಎಂದಾಗ ಈತ ಮರಹತ್ತಿ ಜೇನು ತೆಗೆಯುವ 'ಅಡ್ಡ ಕಸುಬಿ' ಇರಬೇಕೆಂದುಕೊಂಡಿದ್ದೆ.

ಆದರೆ ಅಮ್ಮ 'ಮಂಗ್ಳೂರ್ ಮಾವಯ್ಯ ಈಗ ಜೇನಿನ ಕೆಲಸದಲ್ಲಿ ಇಲ್ಲ; ಮಂಗ್ಳೂರಲ್ಲಿ ಅಡಿಕೆ ವ್ಯಾಪಾರ ಮಾಡುತ್ತಿದ್ದಾರೆ' ಎಂದಳು. ಇದರಿಂದ ನನ್ನ ಮೇಲೆ ಒಳ್ಳೆಯ ಪರಿಣಾಮವೇನೂ ಆಗಲಿಲ್ಲ. ಆಗೆಲ್ಲ ಮಲೆನಾಡಿನಲ್ಲಿ ಸಾಮಾನ್ಯವಾಗಿ ಏಲಕ್ಕಿ ವ್ಯಾಪಾರಕ್ಕೆಂದು ಹಳ್ಳಿಗಳಿಗೆ ಬ್ಯಾರಿಗಳು ಬರುತ್ತಿದ್ದರು. ಕೈಯಲ್ಲೊಂದು ಚೀಲ, ಹೆಗಲಲ್ಲಿ ಗೋಣಿ - ಅದರಲ್ಲೇ ತಕ್ಕಡಿ, ತೂಕದ ಬಟ್ಟುಗಳು - ಸೊಂಟದ ಪರ್ಸಿನಲ್ಲಿ ಹಣ ಇಟ್ಟುಕೊಂಡು ಹಳ್ಳಿ ಹಳ್ಳಿ ತಿರುಗಿ ಚೌಕಾಸಿ ಮಾಡಿ ಏಲಕ್ಕಿ ಕೊಂಡು ಹೋಗುತ್ತಿದ್ದರು. ಪ್ರತಿಸಾರಿ ವ್ಯಾಪಾರ ಮಾಡುವಾಗಲೂ ಚೌಕಾಸಿ ಚರ್ಚೆ, ಜಗಳ ಮುಗಿದ ಮೇಲೆ ಕ್ರಯ ನಿರ್ಧಾರವಾಗಿ ಏಲಕ್ಕಿ ಕೊಂಡು, ಅಲ್ಲೇ ಕಾಫಿ ಕುಡಿದು, ಊಟ ಮಾಡಿ ಹೋಗುತ್ತಿದ್ದುದೂ ಉಂಟು. ಹಲವು ಸಾರಿ ಇವರು ಊರಿಂದೂರಿಗೆ ಸುದ್ದಿ ಮುಟ್ಟಿಸುವ ಪೋಸ್ಟ್‌ಮನ್‌ಗಳು, ಮದುವೆ ಸಂಬಂಧ ಕುದುರಿಸುವ ದಲ್ಲಾಳಿಗಳೂ ಆಗುತ್ತಿದ್ದರು. ಕೆಲವರಿಗೆ ಇಲ್ಲೇ ಮನೆ ಜಮೀನು ಇತ್ಯಾದಿಗಳಿದ್ದರೂ ಊರು ಕೇಳಿದರೆ ಮಂಗಳೂರೆಂದು ಹೇಳುತ್ತಿದ್ದರು.

> ಇಂದಿಗೂ ನನಗೆ ಅಜ್ಜನ ನೆನಪಾಗುವುದು ನನ್ನನ್ನು ಸಣ್ಣವನೆಂದು ಉಪೇಕ್ಷೆ ಮಾಡದೆ ಆತ್ಮೀಯತೆಯಿಂದ ನಡೆಸಿಕೊಂಡ ರೀತಿ ಹಾಗೂ ತಾನು ಕೈಹಾಕಿದ ಯಾವುದೇ ವಿಷಯದಲ್ಲಿ ಅವರು ಸಂಗ್ರಹಿಸುತ್ತಿದ್ದ ಮಾಹಿತಿ ಮತ್ತು ಗಳಿಸುತ್ತಿದ್ದ ಪಾಂಡಿತ್ಯವನ್ನು ಎಲ್ಲರಿಗೂ ಹಂಚುವ ಔದಾರ್ಯಗಳಿಂದ.

ಅಜ್ಜ ಅಡಿಕೆ ವ್ಯಾಪಾರ ಮಾಡುತ್ತಾರೆಂದು ಅಮ್ಮ ಹೇಳಿದಾಗಿನಿಂದ ನನ್ನ ಕಣ್ಮುಂದೆ ಇದ್ದ 'ಅಜ್ಜನ ಚಿತ್ರ' ಪಂಚೆ ಉಟ್ಟು ಸೊಂಟದಲ್ಲಿ ಅಗಲದ ಬೆಲ್ಟ್ ಕಟ್ಟಿಕೊಂಡು ವ್ಯಾಪಾರ ಮಾಡುತ್ತಾ ಊರೂರು ತಿರುಗುತ್ತಿರುವ ವ್ಯಕ್ತಿಯಾಗಿ ಬದಲಾಯಿತೇ ವಿನಾ ಅಜ್ಜನ ಬಗ್ಗೆ ಭಾರೀ ಗೌರವವೇನೂ ಮೂಡಲಿಲ್ಲ.

ಬಂಧುಗಳಿಂದೆಲ್ಲ ದೂರದಲ್ಲಿ ಅಜ್ಞಾತವಾಗಿದ್ದ ನಮಗೂ ನಮ್ಮ ಸಂಬಂಧಿಗಳಿಗೂ ಸಂಪರ್ಕ ಕೊಂಡಿಯಾಗಿ ಇದ್ದವರೆಂದರೆ ಅಣ್ಣ ಜಿ.ಎಸ್. ಉಬರಡ್ಕ (ಇವರು ನನ್ನ ತಾಯಿಯ ಅಕ್ಕನ ಮಗ). ಪ್ರತಿ ವರ್ಷ ಒಂದೆರಡು ಬಾರಿಯಾದರೂ ಅವರು ನಮ್ಮಲ್ಲಿಗೆ ಬರುತ್ತಿದ್ದರು. 'ಅಜ್ಜನಂತೆ' ಹಲವು ಹತ್ತು ಹವ್ಯಾಸಗಳ ಜಿ.ಎಸ್. ನಮ್ಮಲ್ಲಿನ ಕಾಡುಗಳಲ್ಲಿನ ಆರ್ಕಿಡ್ಡನ್ನು ಮಂಗಳೂರು ಅಜ್ಜನಿಗೆ ತಲುಪಿಸಿದರು. ಕೆಲವೇ ದಿನಗಳಲ್ಲಿ ಆರ್ಕಿಡ್

ಸಂಗ್ರಹಿಸಲು ಅಜ್ಜ ನಮ್ಮಲ್ಲಿಗೆ ಬರಲಿದ್ದಾರೆಂದೂ, ಜೊತೆಯಲ್ಲಿ ತಾನೂ ಇದ್ದೇನೆಂದು ಜಿ.ಎಸ್.ರಿಂದ ಪತ್ರ ಬಂತು. ಅಮ್ಮನ ಸಂಭ್ರಮ ಎಲ್ಲೆ ಮೀರಿತು.

**ಕಾರಿನಿಂದಿಳಿದ ಅಜ್ಜ!**

ಅಜ್ಜ ಬರುವ ದಿನ ಬಂತು. ಕರಾರುವಾಕ್ಕಾಗಿ 11 ಗಂಟೆಗೆ ನಮ್ಮ ಮನೆ ಅಂಗಳದಲ್ಲಿ ಕಾರು ಬಂದು ನಿಂತಿತು. ಕಾರಿನಿಂದ ಜುಬ್ಬ ಪೈಜಾಮ ತೊಟ್ಟ ನನ್ನಪ್ಪನಷ್ಟು ವಯಸ್ಸಿನರೊಬ್ಬರು, ಜೊತೆಯಲ್ಲಿ ಮತ್ತೊಬ್ಬರು ಹಾಗೂ ಜಿ.ಎಸ್. ಇಳಿದರು. ಈ ಜುಬ್ಬ ಪೈಜಾಮ ತೊಟ್ಟು ಕಾರ್ ಡ್ರೈವ್ ಮಾಡಿಕೊಂಡು ಬಂದವರೇ 'ಅಜ್ಜ' ಎಂದು ಗೊತ್ತಾದಾಗ ನಾನು ನಂಬಲು ಬಹಳ ಕಷ್ಟಪಡಬೇಕಾಯಿತು.


ಲಕ್ಷ್ಮೀನಾರಾಯಣ ರಾವ್ ಕೊಡಗಿನಲ್ಲಿ ಜೇನು ಪರಿವೀಕ್ಷಕರಾಗಿದ್ದಾಗ : 1936

ನಮ್ಮ ಸಕಲೇಶಪುರ ತಾಲೂಕಿನಲ್ಲಿ - ನಾವಿರುವ ಹಾನುಬಾಳು ಹೋಬಳಿಯಲ್ಲಿ ಆಗ (1966-67) ಇದ್ದುದು ಕೇವಲ ಎರಡೇ ಎರಡು ಕಾರುಗಳು. ಭಾರೀ ಶ್ರೀಮಂತರು ಮಾತ್ರ ಕಾರು ಹೊಂದಿರಲು ಸಾಧ್ಯ ಎಂಬ ಕಲ್ಪನೆ, ನಾನು ಅಂದುಕೊಂಡಿದ್ದ ಅಜ್ಜನ ವಯಸ್ಸು, ಬೆಲ್ಲು-ತಕ್ಕಡಿಯ ವ್ಯಾಪಾರಿಯ ರೂಪಕ್ಕೆ ಬದಲಾಗಿ ತಾನೇ ಡ್ರೈವ್ ಮಾಡಿಕೊಂಡು ಬಂದು ಕಾರಿನಲ್ಲಿ ಬಂದಿಳಿದ ಅಜ್ಜ - ನನ್ನ ಕಲ್ಪನೆಯ ಮೂರ್ತಿಯನ್ನು ಹುಡಿಹಾರಿಸಿಬಿಟ್ಟರು. (ಜೊತೆಯಲ್ಲಿದ್ದ ಸ್ನೇಹಿತರು ರಮೇಶ್ ರಾವ್ ಹಾರ್ವೆಯವರೆಂದು ಇತ್ತೀಚೆಗೆ ತಿಳಿಯಿತು.)

ಬಿಡುವಿದ್ದಾಗಲೆಲ್ಲಾ ಕೆಲಸದ ಹುಡುಗರೊಂದಿಗೆ ಕಾಡು ಸುತ್ತುವುದು ಬಿಟ್ಟು ಬೇರೇನೂ ಕೆಲಸವಿಲ್ಲದಿದ್ದ ನಾನು ಇವರಿಗೆ ಮಾರ್ಗದರ್ಶಿ. 4-5 ಕಿ.ಮೀ. ದೂರ ಕಾಡೆಲ್ಲ ಸುತ್ತಿ ಆರ್ಕಿಡ್ ಸಂಗ್ರಹಣೆ ನಡೆಯಿತು. ಜುಬ್ಬ ಪೈಜಾಮಿನ ಅಜ್ಜ ಸರಸರನೆ ಮರಹತ್ತಿ ಇಳಿಯುತ್ತಿದ್ದ ರೀತಿ, ದಾರಿಯುದ್ದಕ್ಕೂ ತಮಾಷೆ ಮಾಡುತ್ತಾ ಬೇರೆಬೇರೆ ಜಾತಿಯ ಆರ್ಕಿಡ್‌ಗಳ ಬಗ್ಗೆ ವಿವರಿಸುತ್ತ, ಜೇನುನೊಣ ಹಾರುವುದನ್ನು ಕಂಡರೆ ಅದನ್ನು ನೋಡುತ್ತ ಈಗ ಯಾವ ಜಾತಿಯ ಹೂವಿದೆ ಎಂದು ವಿವರಿಸುತ್ತ ಜೊತೆಯಲ್ಲಿ ಇದ್ದವರಿಗೂ ಅದರಲ್ಲಿ ಕುತೂಹಲ ಮೂಡಿಸಿ ನಂತರ ಅದರ ಬಗ್ಗೆ ವಿವರಣೆ ನೀಡುತ್ತಿದ್ದ ಅಜ್ಜ, ಅಮ್ಮ ಹೇಳುತ್ತಿದ್ದಂತೆ ದೊಡ್ಡ ಮನುಷ್ಯನೇ ಇರಬಹುದೆಂಬ ಗುಮಾನಿ ನನ್ನಲ್ಲಿ ಬಲವಾಯಿತು. ಹಾಗೆ ಬಂದವರು ನಮ್ಮಲ್ಲಿ ಕೆಲವು ಸಸ್ಯಗಳನ್ನು ಸಂಗ್ರಹಿಸಿ, ಊಟ ಮುಗಿಸಿ ಮಂಗಳೂರಿಗೆ ಹೋದರು.

**ಗೌರವ ಮಿಶ್ರಿತ ಭಯ**

ಮುಂದೆ ಅಜ್ಜನ ಬಗ್ಗೆ, ಅವರ ಹವ್ಯಾಸಗಳ ಬಗ್ಗೆ, ಸಾಹಸಗಳ ಬಗ್ಗೆ ಅವರಿವರಿಂದ ತಿಳಿಯುತ್ತ ಹೋದಂತೆ ಅಜ್ಜನ ಬಗ್ಗೆ ಒಂದು ಬಗೆಯ ಗೌರವ ಮಿಶ್ರಿತ ಭಯ ಪ್ರಾರಂಭವಾಯಿತು. ಆಮೇಲೆ ಹಲವು ಕಡೆಗಳಲ್ಲಿ ಅವರನ್ನು ಕಂಡರೂ ಸಹ ನಾನಾಗಿ ಅವರನ್ನು ಮಾತನಾಡಿಸುವ ಧೈರ್ಯವೇ ಬರುತ್ತಿರಲಿಲ್ಲ.

ನಾನು ಬೆಳೆಯುತ್ತ ಬಂದಂತೆ ಶಾಲೆ ಕಾಲೇಜು ಮುಗಿಸಿ, ನಾಟಕ, ಸಿನಿಮಾ, ಸಾಕ್ಷರತೆಗಳ 'ಹುಚ್ಚಿ'ಗೆ ಬಿದ್ದ

ಮೇಲೆ ಒಂದು ಸಾರಿ ಮಂಗಳೂರಿನಲ್ಲಿ ಉಳಿಯುವ ಪ್ರಸಂಗ ಬಂತು. ಅಜ್ಜ ಮನೆಯಲ್ಲಿದ್ದರು. ಕೋಣೆಯಲ್ಲಿ 16 ಎಂಎಂ ಫಿಲ್ಮ್‌ಗಳ ರಾಶಿ ಇಟ್ಟುಕೊಂಡು ಏನೋ ಮಾಡುತ್ತಿದ್ದರು. ಕುತೂಹಲದಿಂದ ನೋಡುತ್ತ ನಿಂತೆ. ಮಾತನಾಡುತ್ತ ನನಗೆ ಇದರಲ್ಲೆಲ್ಲ ಆಸಕ್ತಿ ಇದೆಯೆಂದು ಅವರು ಅಂದುಕೊಂಡಿರಬೇಕು. ಕೂಡಲೇ ಕೆಲಸ ನಿಲ್ಲಿಸಿ ಒಳಗಿನಿಂದ ಪ್ರೊಜೆಕ್ಟರ್, ಕ್ಯಾಮರಾ ಎಲ್ಲವನ್ನೂ ತಂದು ಎದುರಿಗಿಟ್ಟರು.

ನಂತರ ಸುಮಾರು ಒಂದು ಗಂಟೆ ಕಾಲ ಕ್ಯಾಮರಾ, ಪ್ರೊಜೆಕ್ಟರ್‌ನ ರಚನೆ, ಅದು ಕೆಲಸ ಮಾಡುವ ರೀತಿ, ಫಿಲ್ಮ್ ಪ್ರೊಸೆಸಿಂಗ್-ಎಡಿಟಿಂಗ್‌ನಿಂದ ಹಿಡಿದು ಅದರಲ್ಲಿನ ಸಮಸ್ಯೆಗಳು, ಬಿಡಿಭಾಗಗಳಿಂದ ಹಿಡಿದು ಚಿತ್ರ ಪ್ರದರ್ಶನದ ವರೆಗೆ ಎದುರಾಗುವ ಸಮಸ್ಯೆಗಳನ್ನು ನಾವೇ ಪರಿಹರಿಸಿಕೊಳ್ಳಬೇಕಾದ ರೀತಿ - ಹೀಗೆ ಚಲನಚಿತ್ರಕ್ಕೆ ಸಂಬಂಧಪಟ್ಟಂತೆ ಎಲ್ಲಾ ವಿಚಾರಗಳನ್ನು ಅವರು ಪ್ರೀತಿಯಿಂದ ನನಗೆ ವಿವರಿಸಿದ್ದು ಒಂದು ಅಪೂರ್ವ ಅನುಭವ.

ಇದೆಲ್ಲ ನಡೆದು ಈಗ ಹಲವು ವರ್ಷಗಳಾಗಿವೆ. ಅಜ್ಜ ಬೆಳೆಯುತ್ತಲೇ ಹೋದರು. ಬೇರೆ ಬೇರೆ ಕ್ಷೇತ್ರಗಳಿಗೆ, ಬೇರೆ ಬೇರೆ ಹವ್ಯಾಸಗಳಿಗೂ ಹರಡುತ್ತ ಹೋದರು.

ಇಂದಿಗೂ ನನಗೆ ಅಜ್ಜನ ನೆನಪಾಗುವುದು ನನ್ನನ್ನು ಸಣ್ಣವನೆಂದು ಉಪೇಕ್ಷೆ ಮಾಡದೆ ಆತ್ಮೀಯತೆಯಿಂದ ನಡೆಸಿಕೊಂಡ ರೀತಿ ಹಾಗೂ ತಾನು ಕೈಹಾಕಿದ ಯಾವುದೇ ವಿಷಯದಲ್ಲಿ ಅವರು ಸಂಗ್ರಹಿಸುತ್ತಿದ್ದ ಮಾಹಿತಿ ಮತ್ತು ಗಳಿಸುತ್ತಿದ್ದ ಪಾಂಡಿತ್ಯವನ್ನು ಎಲ್ಲರಿಗೂ ಹಂಚುವ ಔದಾರ್ಯಗಳಿಂದ.

*ಅಮ್ಮ ಹೇಳುತ್ತಿದ್ದುದು ಸರಿ*
*ಅಜ್ಜ ನಿಜಕ್ಕೂ ದೊಡ್ಡ ವ್ಯಕ್ತಿ*
*ಅಜ್ಜ ಇಂದು ನಮ್ಮೊಡನಿಲ್ಲ*
*ನಮ್ಮೆಲ್ಲರಲ್ಲಿ ಇದ್ದಾರೆ.*

◆



**ಪ್ರಸಾದ್ ರಕ್ಷಿದಿ**
ಅಂಚೆ : ಕ್ಯಾಮನಹಳ್ಳಿ
ವಯ : ಹಾನ್‌ಬಾಳು
ಸಕಲೇಶಪುರ - 577 119
ಹಾಸನ ಜಿಲ್ಲೆ



'ಬೆಳ್ಳಿಮೋಡ'ಕ್ಕಾಗಿ 'ಶ್ರೀ ನಿಲಯ'ದಲ್ಲಿ ಚಿತ್ರೀಕರಣ.



# ಅಜ್ಜಂದಿರನ್ನು ನೆನೆದು

ಸತ್ಯಾ ಎಸ್.

ಈ ಅಜ್ಜ ಹೀಗೆ ನನ್ನೊಳಗಿಳಿದದ್ದು ಯಾವಾಗ?

ಇಷ್ಟು ಕಾಲ ಈ ಪ್ರಶ್ನೆ ಕೇಳಿಕೊಳ್ಳುವ ಸಂದರ್ಭವೇ ಬಂದಿರಲಿಲ್ಲ. ಯಾಕೆಂದರೆ ಪೈಲೂರು ಅಜ್ಜ ಅಷ್ಟೊಂದು ಸಹಜವಾಗಿ, ಸರಳವಾಗಿ, ನಮ್ಮೊಳಗೊಂದು ಭಾವವಾಗಿ ಬೆರೆತಿದ್ದರು. ವ್ಯಾಸರಾವ್ ರಸ್ತೆಯ ಗುರುತು ಹೇಳುವಾಗಲೆಲ್ಲ 'ಅಜ್ಜನ ಮನೆಯ ರಸ್ತೆ' ಎಂದೇ ಸಲೀಸಾಗಿ ಬರುತ್ತಿತ್ತು. 'ಇಗೋ, ಇದೇ ಅಜ್ಜನ ಮನೆ' - ಪುಟ್ಟ ಮಗಳಿಗೆ ಮೊದಮೊದಲು ತೋರಿಸುವಾಗ, 'ಈ ಅಜ್ಜ ಯಾರಮ್ಮ, ನನ್ನಜ್ಜ ಯಾಕೆ ಊರಲ್ಲಿಲ್ಲ?' ಎನ್ನುವಷ್ಟು ಹತ್ತಿರದವರು.

ಹಲವು ಅಜ್ಜಂದಿರನ್ನು ಕಂಡಿದ್ದೇನೆ. ಎಲ್ಲ ಅಜ್ಜಂದಿರು ಹೀಗೇ ಮನದ ಮೂಲೆಯಲ್ಲೊಂದು ಅಳಿಸಲಾಗದ ಛಾಪು ಒತ್ತಿದ್ದಾರೆ. ಹೀಗೇಕೆ?

ಪೈಲೂರು ಅಜ್ಜನ ನೆನಪಲ್ಲಿ ಏನಾದರೂ ಬರೆಯಬೇಕೆಂದು ಕುಳಿತಾಗ ಈ ಎಲ್ಲ ಅಜ್ಜಂದಿರು ನೆನಪಾಗುತ್ತಾರೆ. ಈ ಅಜ್ಜಂದಿರೋ, ಎಲ್ಲ ಗಟ್ಟಿ ಆಸಾಮಿಗಳೇ.

* * *

ಪ್ರತಿ ಹೆಜ್ಜೆಗೊಮ್ಮೆ 'ಗುರುವೆ, ಗುರುವೆ' ಎನ್ನುತ್ತಾ ಬದುಕು ಕಲಿಸಿದ ಗುರುವನ್ನು ನೆನೆಯುತ್ತಿದ್ದ ಸಾಗರನಹಳ್ಳಿ ಅಜ್ಜನಿಗೆ ನಾವೆಲ್ಲಾ ಇರುವೆ, ಇರುವೆ ಎಂದು ತಮಾಷೆ ಮಾಡಿದರೂ ಧ್ಯಾನದ ತಾಳ ತಪ್ಪುತ್ತಿರಲಿಲ್ಲ. 'ದೇವರಿಗಿಂತ ಗುರು ದೊಡ್ಡವನು' ಎನ್ನುವುದು ಅಜ್ಜನ ನಿಲುವಾಗಿತ್ತು. 'ದುಡಿದದ್ದೆಲ್ಲಾ ಉಣ್ಣುವುದಕ್ಕಲ್ಲ' ಎನ್ನುತ್ತಿದ್ದ ಅಜ್ಜ, ಕಾಯಕದ ಮಹತ್ವ ಕಲಿಸಿದ್ದರು.

ದೂರದ ಊರಿಂದ ಬಂದವರನ್ನು ಮನೆಬಾಗಿಲಲ್ಲಿ ನಿಂತು 'ಬನ್ನಿ, ಬನ್ನಿ' ಎಂದು ಉಪಚರಿಸಿದರೆ ರೇಗಿಕೊಂಡು,

'ನಿಮ್ಮನೆಗೆಂದೇ ಅಲ್ಲಿಂದ ಬಂದವನು. ನೀನು ಕರೆಯದಿದ್ದರೂ ನಾನು ಒಳಗೆ ಬರುವವನೇ. ಎಲ್ಲಿ, ಒಳಗೆ ಸರಿ' ಎಂದು ಪಕ್ಕನಿಂದ ಮನೆಯೊಳಗೆ ಹೆಜ್ಜೆ ಇಡುತ್ತಿದ್ದ ಮತ್ತೊಬ್ಬ ಅಜ್ಜ, ನನ್ನಲ್ಲಿ ಮತ್ತೊಂದೇ ಭಾವ. ಅಪ್ಪನ ಪೂರ್ಣ ಸಮ್ಮತಿಯೊಂದಿಗೆ ನಾವು ಹುಡುಗಿಯರು ಸಲ್ವಾರ್ ಕಮೀಜ್ ತೊಡಲು ಈ ಅಜ್ಜನದೇ ಪ್ರೇರಣೆ. 'ಆ ಸೀರೆಯ ಕಿರಿಕಿರಿ ಬಿಡಿಸು ಸಾಕು. ಹೆಣ್ಣು ಮಕ್ಕಳಿಗೆ ಓದು ಬೇಕು, ಚೆನ್ನಾಗಿ ಓದಿಸು.' ಮೊದಮೊದಲು ಹೆಣ್ಣು ಮಕ್ಕಳ ಬದುಕು ಕುರಿತು ಎಲ್ಲ ಅಪ್ಪಂದಿರಂತೇ ಚಿಂತಿಸುತ್ತಿದ್ದ ನನ್ನಪ್ಪನ ನಿಲುವುಗಳನ್ನು ಬದಲಿಸಿದ್ದು ಈ ಅಜ್ಜನ ಇಂತಹ ಖಡಕ್ ಮಾತುಗಳು.

'ತಾರಸಿ ತಾತ'ನಿಗೆ 'ಮೌನ ಬಂಗಾರ'. ವ್ಯಾಪಾರಸ್ಥರಾದರೂ ಮಿಲಿಟರಿ ಶಿಸ್ತು. ಐದು ನಿಮಿಷವೆಂದರೆ ಐದು ನಿಮಿಷವೇ. ಒಂದು ಸೆಕೆಂಡ್ ಹೆಚ್ಚಾದರೂ, 'ಐದು ನಿಮಿಷ, ಒಂದು ಸೆಕೆಂಡ್' ಎನ್ನುತ್ತಿದ್ದವರು. ಮಕ್ಕಳ ಕೂಟ, ಲಾಲ್‌ಬಾಗ್, ಕಬ್ಬನ್‌ಪಾರ್ಕ್, ನಂದಿ ದೇವಸ್ಥಾನ, ಸಿನಿಮಾ, ನಾಟಕ, ಗಾಯನ ಸಮಾಜ ಮತ್ತು ಕೋಟೆ ಹೈಸ್ಕೂಲ್‌ನ ರಾಮನವಮಿ ಉತ್ಸವದ ಸಂಗೀತ ಕಚೇರಿಗಳು - ಇವು ರಜೆ ಕಾಲದಲ್ಲಿ ಮೊಮ್ಮಕ್ಕಳಿಗೆ ತಾತನ ಪ್ಯಾಕೇಜ್. ಗೇಟಿನ ಸದ್ದಾದ ಕೂಡಲೆ ಬಾಗಿಲ ಮರೆಯಲ್ಲಿ ನಿಂತು, ಒಳಬಂದ ಕಾಲೇಜು ಕಲಿವ ಮೊಮ್ಮಗಳಿಗೆ 'ಬೌ' ಎಂದು ಸದ್ದುಮಾಡಿ, ಹೆದರಿಸಿ, ಚಪ್ಪಾಳೆ ತಟ್ಟಿ ಖುಷಿಪಡುತ್ತಿದ್ದ ಪರಿ ಸೀರಿಯಸ್ ತಾತನ ಹಗುರ ಕ್ಷಣಗಳು.

ಪ್ರತಿ ಭೇಟಿಯಲ್ಲೊಂದು ಹೊಸ ಪದ್ಯ ಮತ್ತು ಹೊಸ ಕಥೆ - ಇದು ಪುಟ್ಟ ಕಿನ್ನರಿಗೆ ರೈ ಅಜ್ಜನ ಕೊಡುಗೆ. ಅಪ್ಪತ್ತರದ ರೈ ಅಜ್ಜ ಪುಟ್ಟ ಹುಡುಗಿಯ ಜೊತೆ ಪುಟ್ಟವರಂತೆಯೇ ಕೈ ತಟ್ಟಿ ಪದ್ಯ ಹೇಳುವ ಪರಿ. ಮರುಕ್ಷಣದಲ್ಲೇ ಇಂದಿನ ಪತ್ರಿಕೋದ್ಯಮದ ವಿಶ್ಲೇಷಣೆ. ಪತ್ರಿಕೋದ್ಯಮದ ಅತ್ಯಂತ ಹಳೆಯ ತಲೆಮಾರಿವರಲ್ಲಿ ರೈ ಅಜ್ಜ ಒಬ್ಬರು. ಆಧುನಿಕ ಮಾಧ್ಯಮಗಳ ಸಾಧ್ಯತೆಗಳಲ್ಲಿ ಅಪಾರ ಆಸಕ್ತಿ. ರೈ ಅಜ್ಜನೂ ಸಜ್ಜನರ ಸಂಗದ ಸುಖ ಕೊಟ್ಟವರು.



ಅದೊಂದು ಕನ್ನಡ ರಾಜ್ಯೋತ್ಸವದ ದಿನ. ಮೊಮ್ಮಗಳಿಗೆ (ರಕ್ಷಿತಾ) ಸ್ಟಾಂಪ್ ಸಂಗ್ರಹಣೆಗಾಗಿ ಜಿಲ್ಲಾ ಪ್ರಶಸ್ತಿ ಬಂದ ಖುಷಿಯಲ್ಲಿದ್ದರು ಪೈಲೂರು ಅಜ್ಜ. 'ನನ್ನ ಸಂಗ್ರಹಣೆಯಲ್ಲಿ ಅಜ್ಜನ ಶ್ರಮದ ಪಾಲೇ ಹೆಚ್ಚು' ಎಂಬ ಮೊಮ್ಮಗಳ ಕಸಿವಿಸಿ ಕಿವಿಗೇ ಬೀಳದಷ್ಟು ಸಂಭ್ರಮ. ಪ್ರಶಸ್ತಿ ಪಡೆದು ಸ್ಟೇಡಿಯಂನಿಂದ ಹೊರಬಂದ ಕೂಡಲೇ ಎಲ್ಲ ಕಿರಿಯರ ಹಿಂದೆ ಅಜ್ಜ ನಡೆದದ್ದು ಹೋಟೇಲಿಗೆ. ಸಿಹಿ ತಿನ್ನುವ ನಡುವೆ 'ರಂಗೀಲಾ' ಸಿನಿಮಾ ಮಾತಿಗೆ ಸಿಕ್ಕಿತು. ಹೋಟೇಲಿನಿಂದ ಥಿಯೇಟರ್‌ಗೆ ಸವಾರಿ ಎಂದೆವು. 'ಸೈ' ಎಂದರು ಅಜ್ಜ! ಎಲ್ಲ ದೂರಗಳನ್ನೂ ಸದಾ ನಡಿಗೆಯಲ್ಲೇ ಸವೆಸುತ್ತಿದ್ದ ಅಜ್ಜ ಅಂದು ನಮ್ಮೊಂದಿಗೆ ತಿರುಗಿದ್ದೆಲ್ಲ ಆಟೋದಲ್ಲೇ.

> ಬಣ್ಣ ಬಣ್ಣದ ಮೀನುಗಳು, ಅಂಗಳದಲ್ಲಿ ಹರಡಿ ಬೆಳೆದ ಗಿಡಗಂಟೆಗಳು, ಅಲ್ಲಲ್ಲಿ ಒಂಟಿ ಕಾಲಿನ ಮೇಲೆ ನಿಂತ ಜೇನುಗೂಡುಗಳು. ಹಳೆಯ ಕಾಲದ ಸಿನಿಮಾ ತೋರಿಸುವ ಡಬ್ಬಿ... ಅಜ್ಜನ ಈ ಭಂಡಾರಕ್ಕೆ ನಾವು ಹೊಕ್ಕಿದ್ದು ಹೇಗೋ, ಯಾವಾಗಲೋ ಗೊತ್ತಿಲ್ಲ. ಅಂತೂ ನಮ್ಮ ಮನೆಗೂ ಅಕ್ವೇರಿಯಂ ಬಂದಿತ್ತು.

'ನನ್ನ ಪುಳ್ಳಿ ಡಿ.ಸಿ.ಗಿಂತಲೂ ದೊಡ್ಡವನು. ಡಿ.ಸಿ. ಒಂದು ಜಿಲ್ಲೆಗೆ ಅಧಿಕಾರಿಯಾದರೆ ನನ್ನ ಪುಳ್ಳಿ ಎರಡು ಜಿಲ್ಲೆಗೆ ಅಧಿಕಾರಿ!' ಕೇಂದ್ರ ಸರಕಾರದ ಅಧಿಕಾರಿಯಾಗಿದ್ದ ಮೊಮ್ಮಗನ ಕುರಿತು ಅಜ್ಜನದು ಹೆಮ್ಮೆ. ಮಾತಿಗೊಮ್ಮೆ ಶಿವರಾಮ ಹೇಳಿದ, ಶಿವರಾಮ ನೋಡಿದ, ಶಿವರಾಮ ಮಾಡಿದ... ಸುಳ್ಯ, ಪುತ್ತೂರುಗಳ ಸುತ್ತಲ ಹಳ್ಳಿಗಳಲ್ಲಿ ಜೇನಿನ ಡಬ್ಬಿ, ಸಿನಿಮಾ ಡಬ್ಬಿ ಹಿಡಿದು ಅಡ್ಡಾಡಿದ್ದ ಅಜ್ಜನ ತೆಕ್ಕೆಗೆ ಬಿದ್ದಿದ್ದ ಮೊಮ್ಮಗ, ಅಜ್ಜನ ಆಸಕ್ತಿಗಳ ನಾಡಿ ಹಿಡಿದಿದ್ದ. ಬಣ್ಣ ಬಣ್ಣದ ಮೀನುಗಳು, ಅಂಗಳದಲ್ಲಿ ಹರಡಿ ಬೆಳೆದ ಗಿಡಗಂಟೆಗಳು,

ಮರವನ್ನು ಆಶ್ರಯಿಸಿದ ಆರ್ಕಿಡ್, ಅಲ್ಲಲ್ಲಿ ಒಂಟಿ ಕಾಲಿನ ಮೇಲೆ ನಿಂತ ಜೇನುಗೂಡುಗಳು, ಹಳೆಯ ಕಾಲದ ಸಿನಿಮಾ ತೋರಿಸುವ ಡಬ್ಬಿ... ಅಜ್ಜನ ಈ ಭಂಡಾರಕ್ಕೆ ನಾವು ಹೊಕ್ಕಿದ್ದು ಹೇಗೋ, ಯಾವಾಗಲೋ ಗೊತ್ತಿಲ್ಲ. ಅಂತೂ ನಮ್ಮ ಮನೆಗೂ ಅಕ್ವೇರಿಯಂ ಬಂದಿತ್ತು, ಸಾಕಷ್ಟು ದೊಡ್ಡದೇ.



ಜೇನು, ಮೀನಿನಂತೆ ಸದಾ ಸರಿದಾಡುತ್ತಲೇ ಇದ್ದ ಅಜ್ಜನನ್ನು ಅವಲೋಕನ ಸಾಕ್ಷ್ಯಚಿತ್ರದಲ್ಲಿ 'ಸೆರೆ' ಹಿಡಿದೆವು. ನೂರಾರು ಸಾಕ್ಷ್ಯಚಿತ್ರಗಳನ್ನು ಹಳ್ಳಿಹಳ್ಳಿಗಳಲ್ಲಿ ಪ್ರದರ್ಶಿಸುತ್ತಿದ್ದ ಪೈಲೂರು ಅಜ್ಜ ಈಗ ತಾವೇ ಒಂದು ಸಾಕ್ಷ್ಯಚಿತ್ರದ ವಸ್ತುವಾಗಿದ್ದರು. ಈ ಹೊಸ ಪಾತ್ರ ಅಜ್ಜನಿಗೆ ತುಂಬಾ ಖುಷಿ ತಂದಿತ್ತು.

ಸದಾ ಖುಷಿಯಾಗಿರುವಂತೆ ತೋರುತ್ತಿದ್ದ ಅಜ್ಜನ ಬತ್ತಳಿಕೆಯಲ್ಲಿ ಮುಗಿಯಲಾರದಷ್ಟು ಜೋಕ್‌ಗಳು. ಪ್ರತಿ ಸಂದರ್ಭಕ್ಕೂ ಹಾಸ್ಯದ ತಿರುವು ಕೊಟ್ಟು ನವಿರುಗೊಳಿಸುತ್ತಿದ್ದರು. ಅಜ್ಜನ ಸಂಗಕ್ಕೆ ಬಂದವರು ಅವರಿಂದ ಪ್ರಭಾವಿತರಾಗದೆ ಇರುವುದು ಸಾಧ್ಯವಿರಲಿಲ್ಲ.

ದಿಢೀರ್ ಪ್ರತ್ಯಕ್ಷ, ಹಠಾತ್ ನಿರ್ಗಮನ ಅಜ್ಜನ ವೈಶಿಷ್ಟ್ಯ. ರಕ್ಷಿತಾ ಹೇಳುವಂತೆ, ಮನೆ ಬಾಗಿಲಲ್ಲಿ ಅಜ್ಜನ ಚಪ್ಪಲಿ ಇದ್ದರೆ ಅಜ್ಜ ಮನೆಯಲ್ಲಿದ್ದಾರೆಂದು ಅರ್ಥ. ಚಪ್ಪಲಿ ಇಲ್ಲವೆಂದರೆ ಮನೆಯಲ್ಲಿಲ್ಲ ಎಂದು ಅರ್ಥ. ಈಗ ಅಜ್ಜನ ಚಪ್ಪಲಿ ಇಲ್ಲ...

◆




**ಸತ್ಯಾ ಎಸ್.**
**304, ಮೇ ಫ್ಲವರ್**
**ವೃಂದಾವನ ಅಪಾರ್ಟ್‌ಮೆಂಟ್ಸ್**
**ಆರ್ಯ ಸಮಾಜ ರಸ್ತೆ**
**ಮಂಗಳೂರು - 575 003**






# Kshemabandhu Nanna Chikkayya

**Govind Pailoor**

My beloved Chikkayya, Mangalore Ajja, is a universal Kshemabandhu. His voice was always upbeat, I can hear them loud and clear now. His gesture was friendly to everyone he met. His fairness and forthrightness in character were shiningly coming through from the way people were attracted to him and trusting him to do the right things for them in the marketplace or social meeting or in any undertaking.

He had high regard for his brother, Pailoor Ajja, my father. On any related decision points he would say, 'Everything, as my brother decides' (Ellaa Anna helida haage).

Lucky me, I got to stay with my Chikkayya, in his house, that is our house, that is my house, for seven years living and growing up and going to school as a member of his family, our large joint family. It was my life school also. I learned a great deal in my formative years living with my Chikkayya, Chikkamma, brothers, Krishna Kumar, Ramachandra and sisters Indira, Jayalaxmi and Sharada. We all had the freedom to do whatever we wanted.

Chikkayya encouraged me to be studious in school, to be a top ranking one. So I did. He encouraged me to travel. So I did. When I lost the wrist watch he gave me as my high school graduation present, I didn't tell him. But I

invoked his encouragement to win merit scholarships, the only way I knew then, to make up for the loss. When I started my law apprenticeship in Mumbai, he made the arrangements for my stay in one of his friend's house.

As my ship was pulling away from the shores of Mumbai in 1964 on my way to America, I had no one to bid good bye to on shore like most others aboard. The ribbons they threw joyously, reconnected to the Homeland. For me, the sweet memories of encouragement and blessings from Chikkayya, my father and the whole Pailoor joint family, my friends and folks were with me. I saw them all among the gathered people.

My Kshemabandhu Chikkayya always had positive outlook on life. He had the presence of mind to jump right in to mingle and give any help needed or suggestions to people around him in a given situation. Taking guidance from some of those kinds of simple positive attitudes have helped me a great deal in swimming through my life circumstances.

My Kshemabandhu Chikkayya always had positive outlook on life. He had the presence of mind to jump right in to mingle and give any help needed or suggestions to people around him in a given situation.

Chikkayya's helping nature comes to my mind all the time. Just as an example, in November of 2002 , Sharade and I were taking the Kerala's Backwater scenic boat ride from Kollam to Alleppy. On the boat, I met a girl named Kirti from Italy with her boyfriend named Feelgood. She was born in Ullal-Mangalore, adopted by an Italian family when she was a baby and grew up in Italy. Kirti said she is on her way for the first time to explore her birthplace, however she had no one to visit and her birth families were not known to her.

Immediately, I thought of my beloved Kshemabandhu Chikkayya. Although I had seven more days to go on this Homeland visit before I reach Mangalore to see my Chikkayya and feel the current situation, in my imagination, I told right away to Kirti, 'I am from Mangalore area. You are a member of our family, 'Vasudhaiva Kutumbakam', One World Family as my Chikkayya would consider. We all in the boat are your family members. All Mangaloreans, all Dakshina Kannada people are your family people.'

I continued my conversations with Kirti. 'My Chikkayya (uncle) in Mangalore Sri Pailoor Laxmi Narayana Rao will be very happy to see you. He will

welcome you, shelter you and treat you well as your host. He is a Happy 92. Don't worry if he cannot move around. Don't worry if he cannot accommodate you in his house. He will shelter you in his brother's son Narayana's house next door, or put you up in any number of his friends' houses. He may send you to Pailoor home where his brother Sri Pailoor Mahabaleshwaraya lives, so you can learn more about your family farming people.'

'My Chikkayya will enthusiastically ask and learn all about you and your adventures. He will inspire you to do what you want to do in life. He will also tell you that Deepa, Mahesh, Sharade and I may have passed through your Italian hometown in May of 2002, while passing through that scenic mountainous region with terraced greenhouses. They were driving from the Leaning Tower of Pisa to the French Riviera,' I continued.

'If you so desire, my Chikkayya will introduce you to the simple way of life of Sai Baba. He may tell you about his appreciation for Indian Heritage of healthy mind body relationships, of Pranayaama, Meditation and Yoga. Go and visit him and enjoy your homeland stay.' I can confidently say this to anytime because I know my Chikkayya.

I am proud of my Chikkayya. I love my Kshemabandhu Chikkayya. I will always remember my Kshemabandhu Chikkayya. He will always remain close to my heart.

◆



**Dr. Govind Pailoor**
3 Chase Lane
Saco, ME 04072 USA





# A letter to beloved Appayya

Jayalakshmi Pailoor

Dear Appayya,

Even though we used to communicate regularly through letters since I left India, they used to be short mails. I never expressed in my letters my fondest memories or feelings towards you. I have finally decided to write a lengthy mail to you.

I have so many good things to say about you, Appayya. I like your positive attitude towards life. You used to say, 'Do not worry, God is with you.' When we worry too much, we are not focusing on the promise of God that he will always be with us to guide us through all the things that we do. Your words come to me whenever I feel down or depressed. I hope I will always be able to remember that God is with me.

You are always punctual for work and everything else. Your advice – start early and be on time is so applicable to us in these times. I always tell my children to have training under you to get ready on time.

You have so many hobbies and are always occupied with them. I have never seen you sitting idly and gossiping about others. Your hobbies have attracted so many people. I am realizing that having hobbies is a good thing

to pass time. I never bothered about gardening while I was in India. The only thing I used to do was to make it a point to wear flowers that matched my outfits. Now finally I have started a garden in my own house. I hope my children will learn the value of hobbies.

You are a friend to people of all ages, young and old. You feel comfortable with people of all ages. Your love extends even towards animals. I remember you feeding the lost little kittens with milk, and even crows and dogs never went hungry. In the Bhagavad Gita it is mentioned that God is Imperishable and abides in all living beings. I have had the privilege of seeing this verse truly upheld in your love towards all beings.

You are very modern in your views, particularly regarding women. I am very grateful to you for educating me. That has been your greatest gift to me. I really treasure my education. I tell my children and my friends about your views that girls should be educated and should be able to stand on their own feet if the need arises. It is very true in the modern society. I remember you advising your friend regarding sending his daughter to college, so she could work and be independent when she became a widow at a very young age.

Your devotion to Swami is so strong. Although you have been so actively involved in so many activities, you have never bothered whether your dedication was appreciated by others. That is true devotion in my view. We are told to perform our duties without focusing too much on the fruit of the actions. It is not an easy thing to do, because what motivates us to keep on going with our work is the end result. And yet, through you, I had a glimpse of what it is like to be dedicated without counting on what you would benefit in the end.

With love,

Jayamma





**Dr. Jayalakshmi Pailoor**
43, Jalan SS 21/3
Damansara Utama
47400 Petaling Jaya
Selangor, Malaysia





# ಮೇಘ ಸಂದೇಶ

ಸೀತಾ ಕೆ. ಭಟ್




ಪ್ರೀತಿಯ ಚಿಕ್ಕಯ್ಯ,

ನನ್ನ ನೆನಪಿನಾಳದಿಂದ ಪ್ರತಿ ಘಟನೆಯನ್ನು ಮೇಲೆ ಎತ್ತಿ ಮೆಲುಕು ಹಾಕುವುದು ಒಂದು ಸಮರಸದ ಸವಿಯೂಟದಂತೆ. ಅರ್ಧ ಶತಮಾನದ ಹಿಂದಿನ ನೆನಪು: ಕಟ್ಟದ ಅಜ್ಜ, ದೊಡ್ಡಮ್ಮ (ಅಜ್ಜಿ)ನ ಜೊತೆ ರಜೆಯಲ್ಲಿ ನಾನು ಮಂಗಳೂರಿಗೆ ಬರುವುದಿತ್ತು. ರೈಲಿನ ಪ್ರಯಾಣವೇ ಅಪರೂಪ. ಅದೊಂದು ಸಡಗರ. ರೈಲು ಉಳ್ಳಾಲ ಸೇತುವೆ ದಾಟುತ್ತಿದ್ದಂತೆ ಮಂಗಳೂರು ತಲುಪಿದ ಅತೀ ಉತ್ಸಾಹ. ರೈಲ್ವೇ ಸ್ಟೇಷನ್‌ನಿಂದ ಮನೆಯವರೆಗಿನ ಜಟಕಾ ಸವಾರಿಯ ಆನಂದ ವಿವರಿಸಲು ಅಸಾಧ್ಯ.

ಚಿಕ್ಕಯ್ಯ, ನಿಮ್ಮ ಮನೆ ಅಂದೂ (ಇಂದೂ) ಒಂದು ಛತ್ರ. ನೆಂಟರಿಷ್ಟರಿಂದ ತುಂಬಿದ ಮನೆಯಲ್ಲಿ ಮನೆಯ ಮಂದಿಯನ್ನು ಕಾಣಬೇಕಿದ್ದರೆ ಹುಡುಕಾಡಬೇಕಿತ್ತು. ಕೋರ್ಟು, ಕಚೇರಿ ಹಾಗೂ ಹಲವಾರು ವ್ಯವಹಾರಗಳಿಗಾಗಿ ಮಂಗಳೂರಿಗೆ ಬರುತ್ತಿದ್ದವರಿಗಾಗಿ ನಿಮ್ಮ ಮನೆ ನಿರಂತರ ಚಟುವಟಿಕೆ ತುಂಬಿದ ಛತ್ರ.

ನಿಮ್ಮಲ್ಲಿಗೆ ಬಂದಾಗ, ಬೆಳಗ್ಗೆ ಎದ್ದೊಡನೆಯೇ ಮಾವಿನ ಮರದ ಕಟ್ಟೆಯ ಮೇಲೆ ಕುಳಿತು, ಗುಲಾಬಿ, ಕೆನ್ನಾ, ಆರ್ಕಿಡ್, ದಾಸವಾಳ, ಎಕ್ಸೋರ ಮೊದಲಾದ ತರತರದ ಹೂವುಗಳನ್ನು ನೋಡುವುದೇ ಕಣ್ಣಿಗೆ ಹಬ್ಬ. ಅಂತಹ ತೋಟಗಳು ಅಪರೂಪ. ಇಂದಿನ ಪರಿಸರ ಮಾಲಿನ್ಯ, ಶಬ್ದ ಮಾಲಿನ್ಯ ಅಂದಿರಲಿಲ್ಲ. ಹೂಗಳ ತಂಪಿನೊಂದಿಗೆ ಮಿಶ್ರಿತವಾಗಿ ಬೀಸುತ್ತಿದ್ದ ತಂಗಾಳಿ, ನೀವು ಸಾಕಿದ ಬಣ್ಣಬಣ್ಣದ ಹಕ್ಕಿಗಳ ಚಿಲಿಪಿಲಿ ಹಾಡು, ಮೀನುಗಳು, ಜೇನುಗೂಡು, ನಿಮ್ಮನ್ನು ಕರೆಯುತ್ತಿದ್ದ ಹಸುಗಳ 'ಅಂಬಾ' ಇವೆಲ್ಲವೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಹಸಿರಾಗಿ ಉಳಿದಿವೆ. ಹೂಗಿಡ, ಹಕ್ಕಿ, ಮೀನುಗಳ ಆರೈಕೆ ಮಾಡುತ್ತಾ ದೈನಂದಿನ ಕೆಲಸದಲ್ಲಿ ಮಗ್ನರಾಗಿ ಪಾದರಸದಂತೆ ಓಡಾಡುತ್ತಿದ್ದ ನೀವು ನಮಗೆಲ್ಲ ಸ್ಫೂರ್ತಿದಾಯಕರು

ಹಾಗೂ ಆದರ್ಶಪ್ರಾಯರು.

ನನ್ನ ಮದುವೆಯಾದ ಮೇಲೆ ಒಂದು ವರ್ಷ ಕೊಡಿಯಾಲಬೈಲಿನಲ್ಲಿ ಮನೆ ಮಾಡಿದ್ದೆವು. ಹಾಗಾಗಿ ನಿಮ್ಮ ಮನೆಗೆ ತುಂಬ ಸಲ ಬರುವ ಸುಯೋಗ ನನಗಿತ್ತು. ಚಿಕ್ಕಮ್ಮ ಮಾಡಿದ ಹಲಸಿನ ಹಣ್ಣಿನ ಕಡುಬು, ರುಚಿರುಚಿಯಾದ ತಿಂಡಿಗಳು, ಹಣ್ಣುಗಳನ್ನು ಹೊತ್ತುಕೊಂಡು ಅದೆಷ್ಟು ಬಾರಿ ನೀವು ನಮ್ಮಲ್ಲಿಗೆ ಬಂದಿದ್ದೀರಿ. ನೆನಸಿದರೆ ಕಣ್ಣು ಮಂಜಾಗಿ, ಮನಸ್ಸು ತುಂಬಿ ಬರುತ್ತದೆ. ಪರವೂರಿಗೆ ಹೋದ ಮೇಲೂ ಮಂಗಳೂರಿಗೆ ಬಂದಾಗಲೆಲ್ಲ ನಿಮ್ಮ ಭೇಟಿ ಮಾಡುತ್ತಿದ್ದೆ.

'ಹೌದೇನೇ, ನೋಡಿಲ್ಲಿ, ಯಾರು ಬಂದಿದ್ದಾರೆ' - ಇದು ನಿಮ್ಮ ಎಂದಿನ ಸ್ವಾಗತದ ಮಾತು. ನಿಮ್ಮ ಪ್ರೀತಿ, ಆದರ, ಅತಿಥಿ ಸತ್ಕಾರದ ವೈಖರಿಯಿಂದಾಗಿ ಎಷ್ಟೊಂದು ಜನ ಆತ್ಮೀಯತೆಯಿಂದ ನಿಮ್ಮನ್ನು ನೋಡಲು ಬರುತ್ತಿದ್ದರು!

ಚಿಕ್ಕಯ್ಯ, ಮನಸ್ಸಿನ ನೂರಾರು ಭಾವನೆಗಳನ್ನು ಬರಹದ ಮೂಲಕ ತಿಳಿಸುವ ಶಕ್ತಿ ನನ್ನ ಲೇಖನಿಗಿಲ್ಲ. ಕೆನ್ಯಾ ದೇಶದ ಸಫಾರಿ ನೋಡಲು ಬಂದಿರುವ ನಾನು ಕೆನ್ಯಾ ಪರ್ವತ ಶ್ರೇಣಿ ತಪ್ಪಲಿನಲ್ಲಿರುವ ಸಫಾರಿ ಕ್ಲಬ್‌ನಲ್ಲಿ ಕುಳಿತು ನನ್ನ ಚಿಕ್ಕಯ್ಯನ ಬಗ್ಗೆ ಅಭಿಮಾನದಿಂದ ಎರಡು ಪ್ರೀತಿ ಮಾತುಗಳನ್ನು ಬರೆಯಲೇಬೇಕೆಂದು ನಿಶ್ಚೈಸಿದೆ. ದೂರದ ಹಿಮಾಚ್ಛಾದಿತ ಪರ್ವತ ಶ್ರೇಣಿ, ತಂಗಾಳಿ, ಸುಂದರ ಹೂದೋಟಗಳು, ಹರಿಯುವ ತೊರೆ, ಹಸಿರು ಹುಲ್ಲು, ಅರಳಿದ ಹೂಗಳು, ಹಾರುವ ಪಕ್ಷಿಗಳು ಇರುವ ಇದೊಂದು ನಂದನವನ. ನಿಮ್ಮ ಪ್ರೀತಿಯ ಪ್ರತಿಯೊಂದು ಹವ್ಯಾಸ ಇಲ್ಲಿ ಸಮ್ಮಿಳಿತವಾಗಿ ನನಗೆ ಬರೆಯಲು ಸ್ಫೂರ್ತಿದಾಯಕವಾಗಿದೆ.

ನನ್ನ ಚಿಕ್ಕಮ್ಮ, ತಮ್ಮ ಕೃಷ್ಣ, ಪ್ರೇಮ ನಿಮ್ಮ ಹೆಜ್ಜೆಗಳ ಗುರುತಿನ ಮೇಲೆ ಹೆಜ್ಜೆ ಇಟ್ಟು ನಡೆಯುತ್ತಿದ್ದಾರೆ. ನಿಮ್ಮನ್ನು ಕೃಷ್ಣನಲ್ಲಿ ಕಂಡು ನನಗೆ ತುಂಬ ಸಂತಸ.

ದಟ್ಟ ಕಾಡುಗಳ ಮಧ್ಯೆ ಆಕಾಶದೆತ್ತರಕ್ಕೆ ಬೆಳೆದ ಹೆಮ್ಮರಗಳು, ಗಂಧ, ಚಂದನದಂತಹ ವಿಶೇಷ ಮರಗಳು ಯಾರ ದೃಷ್ಟಿಗೂ ಬೀಳದಿರಬಹುದು; ಕಂಪು ಬೀರುವ ಅಪರೂಪದ ಪುಷ್ಪಗಳು ಅರಳಿ ಬಾಡಬಹುದು; ಸಮುದ್ರದಾಳದಲ್ಲಿ ಯಾರೂ ಗುರುತಿಸದ ಮುತ್ತುಗಳಿರಬಹುದು; ಭೂಗರ್ಭದಲ್ಲಿ ಯಾರಿಗೂ ಸಿಗದಿರುವ ಅಮೂಲ್ಯ ರತ್ನಗಳಿರಬಹುದು. ಅದೇ ರೀತಿ ಪುರಸ್ಕಾರ, ಸನ್ಮಾನಗಳಿಗೆ ಅರ್ಹರಾಗಿದ್ದ ನೀವು ಯಾರ ದೃಷ್ಟಿಗೂ ಬಿದ್ದಿರಲಿಲ್ಲ. ಅವುಗಳನ್ನು ಹಿಂಬಾಲಿಸಿದವರು ನೀವಲ್ಲ ಎನ್ನುವ ಪ್ರಶಂಸೆ ಪಡೆದಿದ್ದೀರಿ.

ನೀವಿಲ್ಲದಿದ್ದರೂ, ನಿಮ್ಮ ನೆನಪಿನ ಇರವು ಚಿರಂತನ. ಮೇಘ ಸಂದೇಶದೊಂದಿಗೆ ಮತ್ತೊಮ್ಮೆ ಅಶ್ರುತರ್ಪಣ, ಶ್ರದ್ಧಾಂಜಲಿ.

ಸೀತೆ

◆



**ಸೀತಾ ಕೆ. ಭಟ್**
1685, 'ದ್ವಾರಕಾ'
30ನೇ ಅಡ್ಡರಸ್ತೆ, 15ನೇ ಮುಖ್ಯರಸ್ತೆ
ಬನಶಂಕರಿ 2ನೇ ಹಂತ
ಬೆಂಗಳೂರು - 560 011



ಅಮೆರಿಕಾದಲ್ಲಿ ಅಜ್ಜ - ಅಜ್ಜಿ : 1987

# ಪ್ರೀತಿಯ ಅಜ್ಜನಿಗೊಂದು ಪತ್ರ

- ದಿವ್ಯಾ ರಾಜೇಶ್

ಪ್ರೀತಿಯ ಅಜ್ಜಾ,

ಎಂದಿನಂತೆ 'ಹೇಗಿದ್ದೀರಿ?' ಅಂತ ಕೇಳಲು ನೀವಿಲ್ಲಿ ಇಲ್ಲವಂತೆ. 'ಇಲ್ಲ' ಅಂತ ಖಂಡಿತವಾಗಿ ಹೇಳಲು ಮನಸ್ಸು ಯಾಕೋ ಒಪ್ಪುವುದೇ ಇಲ್ಲ. ಆರೋಗ್ಯ ಕ್ಷೀಣಿಸುವವರೆಗೂ ನಿಮ್ಮ ಪತ್ರಗಳು ಬರುತ್ತಿದ್ದವು. ನನ್ನದೇ ವಿಳಾಸಕ್ಕೆ ಬಂದ ಮೊದಲ ಪತ್ರ ನಿಮ್ಮದೇ! ನಾನು ಐದು ವರ್ಷದವಳಿದ್ದಾಗ - ಶಾಲೆಗೆ ಸೇರಿ, ಅಕ್ಷರ ಕೂಡಿಸಿ ಓದಲು ಕಲಿತದ್ದಕ್ಕೆ ನಿಮ್ಮ ಇನಾಮು. ಮಾಮೂಲಿಗಿಂತಲೂ ಹೆಚ್ಚು ದೊಡ್ಡ, ಪೋಳೆಕಾಯಿ ಅಕ್ಷರಗಳಲ್ಲಿ. ಪುಟ್ಟ ಪುಳ್ಳಿಗೆ ಓದಲು ಸುಲಭವಾಗುವಂತೆ ಬರೆದದ್ದು.

ನನ್ನ ಬಾಲ್ಯದ ನೆನಪುಗಳ ತುಂಬೆಲ್ಲ ನೀವೇ ತುಂಬಿದ್ದೀರಿ. ಇದೇ 'ಅಜ್ಜಮನೆ'ಯ ಆವರಣದಲ್ಲಿ. ಊರಿಂದ ಬಂದಾಗ ಎಷ್ಟು ಸಂಭ್ರಮದಲ್ಲಿ ದೊಡ್ಡ ಸ್ವರದಲ್ಲಿ ಅಜ್ಜಿಗೆ 'ಹೌದೇನೇ! ಯಾರು ಬಂದ್ರು ನೋಡು!' ಅಂತ ಹೇಳಿ ಸ್ವಾಗತಿಸುತ್ತಿದ್ದಿರಿ. ಯಾರಾದರೂ ಮನೆಗೆ ಬಂದಾಗ, ನೀವು ಕೆಲಸವೇನೂ ಇಲ್ಲದಿದ್ದರೂ ಅತ್ತಿಂದಿತ್ತ ಸ್ವಲ್ಪ ಜಾಸ್ತಿಯೇ ಓಡಾಡಿ ಸಂತೋಷ ವ್ಯಕ್ತಪಡಿಸುತ್ತಿದ್ದಿರಿ. ನಾವು ತಲುಪಿದ ದಿನವೇ ನಮಗೆ ಇಷ್ಟದ ತರಕಾರಿ, ಹಣ್ಣುಗಳನ್ನು ತರುತ್ತಿದ್ದಿರಿ. ಅಜ್ಜಿಗೆ ಗೊತ್ತು - ಈ ತರಕಾರಿಯಿಂದ ಈ ಪುಳ್ಳಿಗೆ ಇಷ್ಟವಾದ್ದನ್ನೇ ಮಾಡಬೇಕೆಂಬ ನಿಮ್ಮ ಇಂಗಿತ.

ಬಂದ ಒಂದೆರಡು ದಿನಗಳಲ್ಲೇ ನಿಮ್ಮ ಜೊತೆಗೆ ಪೇಟೆಗೆ ಕರೆದುಕೊಂಡು ಹೋಗುವುದು ಕ್ರಮ. ಅದೇನು ಸಂಭ್ರಮ ನನಗೆ! ನಿಮ್ಮ ಕೈ ಹಿಡಿದುಕೊಂಡು ನಡೆಯುವುದು - ಬಸ್ಸಿನವರೆಗೂ. ಆಗೆಲ್ಲ ನಿಮ್ಮ ಉಗುರಿಲ್ಲದ ಬೆರಳಿನ ಬಗ್ಗೆ ವಿಶೇಷ ಕುತೂಹಲ. ಎಷ್ಟು ಬಾರಿ ಹೇಳಿದರೂ ಪುನಃ ಅದರ ಕತೆ ಕೇಳಬೇಕು. ಕೊಡಗಿನಲ್ಲಿ ನೀವು ಜೇನುಗೂಡು ಪರೀಕ್ಷಿಸುತ್ತಿದ್ದಾಗ ವಿಷದ ಹಾವು ಕಚ್ಚಿ ಆ ಬೆರಳನ್ನು ಸ್ವಲ್ಪ

ಕತ್ತರಿಸಬೇಕಾಯ್ತಂತೆ. ಆ ನಯವಾದ ಬೆರಳು ನಿಮಗೆ ಎಷ್ಟು ನೋವು ಕೊಟ್ಟಿತ್ತೋ ಏನೋ. ಆದರೆ ನನಗೆ ಮಾತ್ರ ನಿಮ್ಮ ಆ ಬೆರಳೇ ಇಷ್ಟ!

ಬಸ್ ಹತ್ತಿ ಕೂತಾಯ್ತು. ಸಹಪ್ರಯಾಣಿಕರ ಬಳಿ ನಿಮ್ಮ ಮಾತು, ಹಾಸ್ಯ ಕೇಳುವುದೇ ಚಂದ. 'ನನ್ನ ಮೊಮ್ಮಗಳು ಬಂದಿದ್ದಾಳೆ. ಹಾಗೆ ಪೇಟೆಗೆ ಹೋದದ್ದು' ಅಂತ ಅಪರಿಚಿತರಲ್ಲೂ ಹೇಳುವಿರಿ. ಆಹಾ! ಏನು ಸೊಗಸು ಆ ಕ್ಷಣ! ನಾನು ನಿಮಗೆ ಇಷ್ಟು Important ಅಂತ ಎಷ್ಟು ಖುಷಿ. ಅಜ್ಜ, ಅಷ್ಟು ಪುಟ್ಟ ವಯಸ್ಸಿನವರನ್ನು ಹಾಗೆ ತಟ್ಟುವುದು ನಿಮಗೆ ಮಾತ್ರ ಸಾಧ್ಯ! ಒಮ್ಮೆಯಂತೂ ಟಿಕೆಟ್ ತೆಗೆಯಲು ನನ್ನ ಕೈಗೇ ಹಣ ಕೊಟ್ಟಿರಿ. ಕಂಡಕ್ಟರ್ ಮಾಮ 'ಎಲ್ಲಿಗೆ?' ಅಂದರೆ ನಿಸ್ಸಂಶಯವಾಗಿ 'ಅಜ್ಜನ ಮನೆಗೆ' ಅಂದೆ. ಎಲ್ಲರೊಂದಿಗೆ ನೀವೂ ನಕ್ಕು ಅವನಿಗೆ ಉತ್ತರಿಸಿದಿರಿ. ನೀವು ನನಗೆ ಹೆಣೆಯುತ್ತಿದ್ದ ಮೂರಕ್ಕಿಂತ ಕಮ್ಮಿಯಿಲ್ಲದ ಜಡೆಗಳು! ಅವಕ್ಕೆ ಅಜ್ಜಿ ಮುಡಿಸುತ್ತಿದ್ದ ಹೂವಿನ ಮಾಲೆ! ಆ ಕನಕಾಂಬರದ ಮಾಲೆ ನಿನ್ನೆ ನೀವೇ ಕೊಯಿದು, ಕಟ್ಟಿ, ಸ್ವಾಮಿ ಫೋಟೊಕ್ಕೆ ಇಟ್ಟದ್ದು - ನೀವೇ ನೆಟ್ಟು ನೀರೆರೆದು ಬೆಳೆಸಿದ ಗಿಡಗಳದ್ದು. ತಲೆ ಬಾಚುವಾಗ ನಿಮ್ಮ ಹಾಸ್ಯ ಚಟಾಕಿ 'ನಿನ್ನಮ್ಮ ಜೇನುಸಾಕಣೆ ಮಾಡ್ತಾಳೆ, ನೀನು ಹೇನುಸಾಕಣೆ ಮಾಡ್ತಿ!'



ಅಜ್ಜ ಮತ್ತು ಅಮ್ಮ! (1948)

> ನೀವು ಸದಾ ನಮ್ಮೊಂದಿಗಿದ್ದೀರಿ ಅಜ್ಜಾ - ನಗುವ ಹೂಗಳಲ್ಲಿ, ಜೇನ್ನೊಣದ ಝೇಂಕಾರದಲ್ಲಿ, ಮಿಣ್ಮಿಣಿಯ ಮಾಯಾಲೋಕದಲ್ಲಿ, ರಾತ್ರಿ ನುಸಿಬಲೆಯೊಳಗೆ ನುಸುಳುವ ಮುನ್ನ ಹಲ್ಲಿನ ಸೆಟ್ ಕಳಚಿಡುವ ಎಲ್ಲಾ ಮುದ್ದು ಬೊಚ್ಚು ಬಾಯಿಗಳಲ್ಲಿ.

ಮನೆಯಲ್ಲಿ ಸಿಹಿ ಹಂಚಲು ನಿಮಗೆ ಪ್ರತ್ಯೇಕ ಕಾರಣ ಬೇಕಿಲ್ಲ. 'ಆಸ್ಪತ್ರೆಯಲ್ಲಿ ಮಗು ಹುಟ್ಟಿತಂತೆ, ತೆಕ್ಕೊಳ್ಳೀ!' ಅಂತ ಕಲ್ಲುಸಕ್ಕರೆ ಹಂಚುತ್ತಿದ್ದಿರಿ. ಮಂಗಳೂರಿನ ಆಸ್ಪತ್ರೆಯಲ್ಲಿ ನೆಂಟರಿಷ್ಟರು ಮಲಗಿದ್ದರೆ, ಮನೆಯಿಂದ ಊಟ, ತಿಂಡಿಯನ್ನು ನೀವೇ ಎಳ್ಳಷ್ಟೂ ಅಸಮಾಧಾನವಿಲ್ಲದೆ ತೆಗೆದುಕೊಂಡು ಹೋಗುತ್ತಿದ್ದಿರಿ. ಅವರಿಗೆ ನಿಮ್ಮ ಹಾಸ್ಯಭರಿತ ಮಾತಿನಿಂದ ಉತ್ಸಾಹ ತುಂಬಿ ಬರುತ್ತಿದ್ದಿರಿ. ನಾನು ಕಾಲು ಮುರಿದು ಮಲಗಿದ್ದಾಗಲಂತೂ ನೀವು ಬರುವುದನ್ನೇ ನಿರೀಕ್ಷೆ ಮಾಡುತ್ತಿದ್ದೆ.

ನೀವು ಮಕ್ಕಳನ್ನು ಪ್ರೋತ್ಸಾಹಿಸುತ್ತಿದ್ದ ರೀತಿಯೇ ವಿಶಿಷ್ಟವಾದದ್ದು. ರಜೆಯಲ್ಲಿ ಬಂದಾಗ ಕೃಷ್ಣಮಾವನ ಬಾಲ್ಯದ ಸೈಕಲ್ ಮೇಲೆ ಸವಾರಿ ಮಾಡಲು ಪ್ರಯತ್ನಿಸುತ್ತಿದ್ದೆ. ಅದನ್ನು ಮೌನವಾಗಿ ಗಮನಿಸಿದ ನೀವು ಅದನ್ನು ರಿಪೇರಿ ಮಾಡಿಸಿ, ನೀವೇ ಪೈಂಟ್ ಹೊಡೆದು ಸದ್ದಿಲ್ಲದೆ ಊರಿಗೇ ರವಾನಿಸಿದಿರಿ!

ನಿಮ್ಮಿಂದ ನಾನು ಕಲಿತದ್ದು ಬಹಳ. ಸಮಯಕ್ಕೆ ಸರಿಯಾಗಿ ಮನೆಮಂದಿಯೊಡನೆ ಉಣ್ಣುವುದು; ಹೆಚ್ಚು ತರಕಾರಿ, ಹಣ್ಣುಗಳನ್ನು ತಿನ್ನುವುದು, ಯಾವ ತರಕಾರಿಯೂ ಆಗದು ಎಂಬ 'ಕೋಲ' ಇಲ್ಲದಿರುವುದು; ಆತ್ಮವಿಶ್ವಾಸದಿಂದಿರುವುದು, ಔದಾರ್ಯ, ಇತರರ ಸದ್ಗುಣಗಳನ್ನು ಗುರುತಿಸಿ ಪ್ರಶಂಸಿಸುವುದು, ಮಾಡುವ ಕೆಲಸದ ಮೇಲೆ ಪ್ರೀತಿ, ಶ್ರದ್ಧೆಯಿಡುವುದು; ಹೀಗೆ ಇನ್ನೂ ಎಷ್ಟೋ...

ಅಜ್ಜಾ, ಮಟಮಟ ಮಧ್ಯಾಹ್ನದ ಬಿಸಿಲಿಗೆ, ಕತ್ತಲಾದ ಮೇಲೆ ಮನೆಯಿಂದ ಹೊರಗೆ ಓಡಾಡಿದರೆ, ಕರೆಂಟ್ ಇಲ್ಲದಾಗ ಕತ್ತಲಲ್ಲಿ ಅತ್ತಿಂದಿತ್ತ ಮನೆಯೊಳಗೆ ಓಡಾಡಿದರೆ ನಿಮಗಾಗುವ ಅಸಮಾಧಾನ ನನಗೆ ಅರ್ಥವಾಗುತ್ತದೆ. ಆದರೆ ಎಲ್ಲಾ ಸಮಯ ಪಾಲಿಸಲಾಗುತ್ತಿಲ್ಲ; ದಯವಿಟ್ಟು ಕ್ಷಮಿಸಿ.

ನೀವು ಸದಾ ನಮ್ಮೊಂದಿಗಿದ್ದೀರಿ ಅಜ್ಜಾ - ನಗುವ ಹೂಗಳಲ್ಲಿ, ಜೇನ್ನೊಣದ ಝೇಂಕಾರದಲ್ಲಿ, ಮಿಣ್ಮಿಣಿಯ ಮಾಯಾಲೋಕದಲ್ಲಿ, ರಾತ್ರಿ ನುಸಿಬಲೆಯೊಳಗೆ ನುಸುಳುವ ಮುನ್ನ ಹಲ್ಲಿನ ಸೆಟ್ ಕಳಚಿಡುವ ಎಲ್ಲಾ ಮುದ್ದು ಬೊಚ್ಚು ಬಾಯಿಗಳಲ್ಲಿ. ನನ್ನ ಈ ಪತ್ರಕ್ಕೆ ಉತ್ತರ - ಹೊಸ ಅಂಚೆಚೀಟಿ ಹೊತ್ತ ಕವರಿನಲ್ಲಿ - ಬಂದೀತೇನೋ ಎಂಬ ದೂರದ ನಿರೀಕ್ಷೆ ನನಗೆ!

ನೀವೀಗ ಇರುವಲ್ಲಿ, ನಿಮ್ಮ ಸುತ್ತಮುತ್ತಲಿನವರನ್ನು ಎಂದಿನಂತೆ ನಗಿಸುತ್ತಾ, ನೀವೂ ನಗುತ್ತಾ ಸಂತೋಷದಿಂದಿರಿ ಎಂಬ ಹಾರೈಕೆಯೊಂದಿಗೆ,

ನಿಮ್ಮ ಪ್ರೀತಿಯ ಪುಳ್ಳಿ,

ದಿವ್ಯಾ





**Divya Rajesh**
Block 171
Woodlands Street II
# 05-51
Singapore 730 171

## ರಾಯರ ನುಡಿಮುತ್ತುಗಳು

- ಪ್ರಾಯ ಹೋದಂತೆ ಬರುವ ಕಾಯಿಲೆಗಳು extra qualification ಇದ್ದಂತೆ.
- ಜೀವನ ಸುಖಮಯವಾಗಲು ಕಳೆದುಹೋದ ಮತ್ತು ಮುಂದೆ ಬರುವ ದಿನಗಳ ಬಗ್ಗೆ ಚಿಂತಿಸದಿರಿ.
- ಹಣ ಇರುವುದೇ ಖರ್ಚು ಮಾಡಲು; ಕೈ ಇರುವುದೇ ಕೆಲಸ ಮಾಡಲು.
- ಕೆಲವರಿಗೆ ತಲೆ ಇರುವುದೇ ಬಿಸಿ ಮಾಡಲು!

**- ಎಂ. ಆರ್. ಪಾವಂಜೆ**

# In Memory of My Ajja: The King of All Trades

**His Pulli, Shubha Bhat**

"He was the king of all trades and Jack of None",

Says Amma, relating her memories about her Appaya
As she tucks me in to sleep in my bed, in our home, in America.
Although I am physically thousands of miles away from Ajja,
Amma's stories make me feel closely connected to him.
Her memories bring vivid pictures into my head
About the times I spent with Ajja during
Our visits to Manglore.
And with these memories and pictures, I begin to dream…

*Ajja was the king of all trades and Jack of none,*
*But he was especially the king of charming children*
*When I was a child, a very little one,*
*He always had games and tricks to entertain me.*
*I would be in awe, in pure amazement*
*As he would reverse his teeth and stick them out.*
*I have learned through the years that he used fake teeth*
*But despite that fact, I am still in awe at his*
*Fun-loving ability to dazzle me as a child.*

*Ajja was the king of all trades and Jack of none,*
*But he was especially the king of encouraging success.*
*When I showed him my magic tricks one by one*
*His eyes sparkled with a child's wonder and delight.*
*He applauded as I made objects disappear and cards appear,*
*And he told all of his guests that I was the "Great Magician".*
*Also, when we visited India before my Bharatha Natyam Arangetram*
*Ajja would always call me, "Arangetram" in order to*
*Encourage and inspire me to do my best.*

*Ajja was the king of all trades and Jack of none,*
*But he was especially the king of caring for animals.*
*In the mornings, I would wake up not only to the glorious rising sun,*
*But also to Ajja's bird calls, "KAAA KAAA KAAA!"*
*I would get up and see Ajja putting a plate of rice outside as the*
*Kakannas (crows) hovered hungrily over Ajja's generous gift.*
*Ajja would lead me into the garden and he would*
*Show me all of the beautiful catfish, goldfish, and baby fish.*
*Ajja extended his love to many living beings.*

*Ajja was the king of all trades and Jack of none,*
*But he was especially the king of telling jokes.*
*Whether young or old, physically strong or weak,*
*Ajja's mind was always sharp, perceptive and witty*
*Whenever guests came to his house, he would make them*
*Feel at home by brewing laughter and smiles.*
*Even during his pain in the hospital, Ajja's humor would*
*Bring levity and joy to the somber situation.*
*Ajja was a people person, and a family man.*

*Ajja was the king of all trades and Jack of none,*
*But he was especially the king of improving lives*
*I learned how Ajja helped the beetle-nut trade become*
*More efficient for rural farmers and industrialized markets.*
*Ajja was the reliable and respected liaison*
*Between the two different worlds that he was part of.*
*Although he moved to the city to pursue his academics and career,*
*Ajja had empathy for the farmers, never letting go of his roots,*

*Aways giving back and contributing.*

"Ajja was the king of all trades and Jack of none",
My mind thinks as I wake up the next morning,
Ready to start a new day in America.
Although I am thousands of miles away from Ajja,
My dreams and memories connect me to his spirit.
His encouragement and "busy-bee attitude" inspires me to
Work hard, care about others, and spread happiness.
I will always remember his supportive words,
*"Good luck, Good Luck, Good Luck Shubha!"*

◆



**Shubha Bhat**
(peace, love and happiness)
1214 Mayapple Lane
West Chester, PA 19380
USA



## My earliest memories of Mangalore Ajja

My earliest memories of Mangalore Ajja are filled with laughter and joy. He would always have some joke, trick, game or puzzle to show me and make me happy. In my more recent visits I showed him some magic tricks that I had learned and he loved them.

Whenever anyone came to Mangalore Ajja's house while I was there, he would tell him or her that I was magical. From my personal experience I can tell that Ajja had a special way with kids because he appreciated their presence and made them cheerful. With what I have experienced I am not surprised that Ajja's amiable character, tireless humor, trustworthy friendship and desire to give rather than receive have impacted so many people throughout his 91 years of life.

I am sure that Ajja's memory will live on in the heart of each person that he has touched and his spirit will continue spreading forever.

**- Shubha Bhat**



# ಅಜ್ಜ : ಆಧುನಿಕ ಮನಸ್ಸಿನ ಅನನ್ಯ ಅನಾವರಣ

● ಶಿವರಾಂ ಪೈಲೂರು

● ಅಗ್ರಲೇಖನ ● ಪ್ರಭಾವ ● ಸಹೋದರ ವಾತ್ಸಲ್ಯ ● ಅಜ್ಜ ಮತ್ತು ಬರವಣಿಗೆ ● ಕಾರಂತರ ಮುನ್ನುಡಿ ● ಫೊಟೋಗ್ರಫಿಯಲ್ಲಿ ಅಜ್ಜನ ಆಸಕ್ತಿ ● ಅಜ್ಜ ಮತ್ತು ಪ್ರೊಜೆಕ್ಟರ್ ● ಅಜ್ಜ ಮತ್ತು ಕಾರು ● ಪ್ರೇಮಪಕ್ಷಿಗಳಿಗೆ ವಿದಾಯ; ಕಾಗೆ ಬಳಗಕ್ಕೆ ಸ್ವಾಗತ ● ಅಜ್ಜ ಮತ್ತು ಮೆಲ್ಲಿಫೆರಾ ● ಆತ್ಮಕಥನ

ಕೇರಳದ ಕೊಚ್ಚಿನ್‌ನಲ್ಲಿ ಸಂಚಾರ ಮಂಡಳಿಯಲ್ಲಿ ಕೆಲಸ ಮಾಡುತ್ತಿದ್ದ ನಾನು ಡಿಸೆಂಬರ್ 1991ರಲ್ಲಿ ಕೇಂದ್ರ ಸರಕಾರದ ಕ್ಷೇತ್ರಪ್ರಚಾರಾಧಿಕಾರಿಯಾಗಿ ನೇಮಕಗೊಂಡು ಮಂಗಳೂರಿಗೆ ಬಂದೆ.

'ನೀನು ಮಂಗಳೂರಿಗೆ ಬಂದದ್ದು ಒಳ್ಳೆಯದೇ ಆಯ್ತು. ಮಂಗಳೂರು ಅಜ್ಜನ ಕುರಿತು ನೀನು ಸಮಗ್ರವಾದ ಲೇಖನ ಬರೆಯಬೇಕು; ಪುಸ್ತಕವಾದರೂ ಸರಿ' ಎಂದು ಸಂಬಂಧದಲ್ಲಿ ಅಣ್ಣನಾಗಿರುವ, ಒಡನಾಟದಲ್ಲಿ ಹಿರಿಯ ಗೆಳೆಯನಂತಿರುವ ಜಿ.ಎಸ್. ಉಬರಡ್ಕ ಒಂದೇ ಮಾತಿನಲ್ಲಿ ಜವಾಬ್ದಾರಿ ಹೊರಿಸಿಬಿಟ್ಟರು. ಆಗ ನನಗೆ ಏನೂ ಅನ್ನಿಸಲಿಲ್ಲ. ಮಂಗಳೂರು ಅಜ್ಜನ ಕುರಿತು ಅಷ್ಟಿಷ್ಟು ಕೇಳಿದ್ದು, ಕೆಲವೇ ಸಲ ಅವರನ್ನು ಕಂಡದ್ದನ್ನು ಹೊರತುಪಡಿಸಿದರೆ ಅವರ ಬಗ್ಗೆ ನನಗಿನ್ನೇನೂ ಗೊತ್ತಿರಲಿಲ್ಲ. ಹಾಗಾಗಿ ಸುಮ್ಮನಾದೆ.

ಆದರೆ ಅಣ್ಣ ಸುಮ್ಮನಿರಬೇಕಲ್ಲ! ನಾನು ಊರಲ್ಲಿ ಇರುತ್ತಿದ್ದ ಸಂದರ್ಭಗಳಲ್ಲಿ ಫೋನ್ ಮಾಡಿದಾಗಲೆಲ್ಲ ಅವರದ್ದು ಒಂದೇ ಪ್ರಶ್ನೆ 'ಲೇಖನದ ಕೆಲಸ ಎಲ್ಲಿಯವರೆಗೆ ಬಂತು?' ಪರಸ್ಪರ ಭೇಟಿಯಾದಾಗಲೂ ಇದೇ ಪ್ರಶ್ನೆ; ಒತ್ತಾಯ.

ಹಾಗಂತ ಮಂಗಳೂರು ಮನೆಯಲ್ಲಿ ಅಜ್ಜನನ್ನು ಗಮನಿಸಿದರೆ, ಮಾತಿಗೆಳೆದರೆ ನನ್ನೊಳಗಿನ ಬರಹಗಾರನಿಗೆ ಲೇಖನದ ವಿಷಯವಾಗುವ ಯಾವ ವಿಶೇಷವೂ ಅವರಲ್ಲಿ ವ್ಯಕ್ತವಾಗುತ್ತಿರಲಿಲ್ಲ. ಪ್ರತಿ ಗುರುವಾರ ಮಣ್ಣಗುಡ್ಡದ ಹಾರ್ವೆ ಮನೆ, ಸಾಯಿಮಂದಿರಕ್ಕೆ ಭೇಟಿ, ಗಾಂಧಿ ಪ್ರತಿಷ್ಠಾನ - ಭಾರತೀಯ ವಿದ್ಯಾಭವನ - ಫಿಲಾಟೆಲಿಕ್ ಸೊಸೈಟಿ ಮೀಟಿಂಗ್‌ಗಳು, ಒಂದಷ್ಟು ಕಾಗದ ಬರೆಯುವುದು, ಹಳೇ ಪೋರ್ಟೆಬಲ್ ಟೈಪ್‌ರೈಟರ್‌ನಲ್ಲಿ ಏನನ್ನೋ ಕುಟ್ಟುವುದು, ಮೀನಿನ ತೊಟ್ಟಿ, ಅಕ್ವೇರಿಯಂಗಳಿಗೆ ಆಹಾರದ ಉಂಡೆ ಹಾಕುವುದು, ಹೂದೋಟದಲ್ಲಿ ಹೂಕುಂಡಗಳನ್ನು ಅತ್ತಿಂದಿತ್ತ ಎತ್ತಿಡುವುದು, ಗಿಡಗಳಿಗೆ ಪೈಪಿನಲ್ಲಿ ನೀರು ಬಿಡುವುದು, ಆರಾಮ ಕುರ್ಚಿಯಲ್ಲಿ ಕುಳಿತು ನ್ಯಾಷನಲ್ ಜಿಯಾಗ್ರಾಫಿ ಓದುವುದು... ಅಜ್ಜನ ಬಿಡುವಿಲ್ಲದ ಇಂಥ ತೊಡಗುವಿಕೆಯಲ್ಲಿ ನನಗೆ ಹೊಸತೇನೂ ಕಾಣಿಸಲಿಲ್ಲ.

ಈ ನಡುವೆ ಕಾರ್ಯನಿಮಿತ್ತ ನಾನು ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳ ಗ್ರಾಮೀಣ ಪ್ರದೇಶಗಳಲ್ಲಿ ಸುತ್ತಾಡತೊಡಗಿದೆ. ಮಕ್ಕಳಲ್ಲಿ, ಸಾರ್ವಜನಿಕರಲ್ಲಿ ವಿವಿಧ ವಿಷಯಗಳ ಕುರಿತು ಅರಿವು ಮೂಡಿಸುವುದಕ್ಕಾಗಿ ಚಲನಚಿತ್ರ ಪ್ರದರ್ಶನ, ಉಪನ್ಯಾಸ ಕಾರ್ಯಕ್ರಮ ಏರ್ಪಡಿಸುವುದು ಕ್ಷೇತ್ರಪ್ರಚಾರ ನಿರ್ದೇಶನಾಲಯದ ಪ್ರಮುಖ ಕೆಲಸ. ಏಷ್ಯನ್ ಗೇಮ್ಸ್‌ನಿಂದ ಹಿಡಿದು ಸಾಕ್ಷರತೆ, ಆರೋಗ್ಯಪಾಲನೆ, ನೆಲ - ಜಲ ಸಂರಕ್ಷಣೆ, ಜೇನುಸಾಕಣೆವರೆಗೆ ನೂರಾರು ಸಾಕ್ಷ್ಯಚಿತ್ರ - ಚಲನಚಿತ್ರಗಳು ನಮ್ಮಲ್ಲಿದ್ದವು.


ಅಜ್ಜನ ಟೈಪ್‌ರೈಟರ್

ಬೆಳಿಗ್ಗೆ ಮತ್ತು ಮಧ್ಯಾಹ್ನ ಶಾಲೆಗಳಲ್ಲಿ; ಸಂಜೆ ಸಾರ್ವಜನಿಕ ಸ್ಥಳಗಳಲ್ಲಿ ಫಿಲಂ ಶೋ ನಡೆಸುತ್ತಿದ್ದೆವು. ಆಗ ನನ್ನೊಂದಿಗೆ ಇದ್ದವರು ಗುಂಡಿಬೈಲು ಶ್ರೀನಿವಾಸ್ ಹಾಗೂ ಎಂ.ಪಿ. ಕನಕರತ್ನಂ. ಹಳ್ಳಿಗಾಡು ಸುತ್ತಾಟದಲ್ಲಿ ಪ್ರತಿದಿನವೂ ಹೊಸ ಅನುಭವ.

ಈ ಸಂದರ್ಭದಲ್ಲಿ ದಕ್ಷಿಣ ಕನ್ನಡದ ಹಳ್ಳಿಗಳಲ್ಲಿ ಕಾರ್ಯಕ್ರಮ ಹಮ್ಮಿಕೊಂಡಾಗಲೆಲ್ಲ ನನ್ನ ಹೆಸರು ಹೇಳಿದಾಕ್ಷಣ, 'ಅಡಿಕೆ ಸೊಸೈಟಿಯಲ್ಲಿದ್ದ ಪೈಲೂರರು ನಿಮಗೇನಾಗಬೇಕು? ಜೇನುಸಂಘದಲ್ಲಿ ಒಬ್ಬರು ಪೈಲೂರರು ಇದ್ದರಲ್ಲ? ಸತ್ಯಸಾಯಿ ಬಾಬಾ ಅವರ ಫಿಲಂ ತೋರಿಸುವ ಪೈಲೂರರು ನಿಮ್ಮ ಸಂಬಂಧಿಯೇ?' - ಹೀಗೆ ಒಂದಲ್ಲ ಒಂದು ಪ್ರಶ್ನೆ ಕೇಳಿಬರುತ್ತಿತ್ತು. 'ಅವರು ನನ್ನ ಅಜ್ಜ' ಎಂದೊಡನೆ ಕೆಲವು ಹಿರಿಯರ

ಮುಖ ಹಿಗ್ಗಿ, ಅಜ್ಜನೊಂದಿಗೆ ಅವರ ಒಡನಾಟದ ದಿನಗಳನ್ನು ಮೆಲುಕು ಹಾಕುತ್ತಿದ್ದರು.

### ಅದ್ಭುತ ಪ್ರಪಂಚ

'ಅಜ್ಜ ನೋಡಿದಂತಲ್ಲ' ಎಂಬ ಭಾವನೆ ನನ್ನಲ್ಲಿ ಮೂಡಿದ್ದು ಹೀಗೆ. ಕಾರ್ಯಕ್ರಮ ಮುಗಿಸಿ ಮಂಗಳೂರಿಗೆ ಬಂದ ಬಳಿಕ ಅಜ್ಜನಿಗೆ ವರದಿ ಒಪ್ಪಿಸದಿದ್ದರೆ ಬಿಡುತ್ತಿರಲಿಲ್ಲ. ಒಂದೊಂದು ಊರಿನ ಹೆಸರೂ ಹೇಳುತ್ತಿದ್ದಂತೆ ಅಜ್ಜ ಆ ಊರಿನ ಬಗ್ಗೆ ಏನಾದರೂ ಒಂದಿಷ್ಟು ವಿವರ ನೀಡುತ್ತಿದ್ದರು. ಅವರು ಅಲ್ಲಿಗೆ ಭೇಟಿ ನೀಡಿದ ಬಗ್ಗೆ, ಆ ಊರಿನ ವೈಶಿಷ್ಟ್ಯದ ಬಗ್ಗೆ, ಅಲ್ಲಿಯ ಪ್ರತಿಭಾನ್ವಿತ ವ್ಯಕ್ತಿಯ ಬಗ್ಗೆ ಅಜ್ಜ ವಿವರಿಸುತ್ತಿದ್ದರು. ಹೀಗೆ ನನಗೂ ಅಜ್ಜನಿಗೂ ಶುರುವಾದ ಸಂವಾದ ಮುಂದಿನ ದಿನಗಳಲ್ಲಿ ಒಂದು ಅದ್ಭುತ ಪ್ರಪಂಚವನ್ನೇ ನನ್ನ ಮುಂದೆ ತೆರೆದಿಟ್ಟಿತು.



ಅಜ್ಜನ ಆರ್ಕಿಡ್ ಪ್ರೇಮಕ್ಕೆ ಎಲ್ಲೆಯಿರಲಿಲ್ಲ.

ಆ ಪ್ರಪಂಚದಲ್ಲಿ ಏನಿತ್ತು ಏನಿಲ್ಲ! ಹೊಸ ಹೊಸ ಯೋಚನೆಗಳು, ಉತ್ಸಾಹದ ಚಿಲುಮೆಗಳು, ಬಗೆಬಗೆಯ ಹವ್ಯಾಸಗಳು, ಕಾಡು - ಬೆಟ್ಟಗಳು, ನದಿಯೊಡಲಿನ ಕಲ್ಲುಗಳು, ಕೆರೆಯಂಚಿನ ಜಲಸಸ್ಯಗಳು, ಉತ್ಕಟ ಪ್ರೀತಿ, ಉದಾತ್ತ ಮಾನವೀಯ ಮೌಲ್ಯಗಳು ... ಇವೆಲ್ಲವುಗಳ ಜೊತೆಗೆ ನಾನು ಕಾಣದ, ನನ್ನನ್ನು ಸದಾ ಕಾಡುತ್ತಿದ್ದ ನನ್ನ ಅಜ್ಜ (ಅಪ್ಪನ ಅಪ್ಪ) ಶಿವರಾಮಯ್ಯನ ದರ್ಶನ.

ಆ ದಿನಗಳಲ್ಲಿ ಅಣ್ಣ ಜಿ.ಎಸ್. ನೇತೃತ್ವದಲ್ಲಿ ಗೆಳೆಯರನೇಕರು ಸೇರಿ ಆಗೊಮ್ಮೆ ಈಗೊಮ್ಮೆ ಚಾರಣ ಹೋಗುತ್ತಿದ್ದೆವು. ಬಂಟಮಲೆ, ಕುಮಾರಪರ್ವತ, ಮ್ಯಾಲರಕೋಟೆಯಿಂದ ಹಿಡಿದು ಸಕಲೇಶಪುರ, ಕೊಡಗಿನ ಕಾಡುಗಳ ವರೆಗೆ ನಮ್ಮ ಸುತ್ತಾಟ. ಆಗೆಲ್ಲ ಅಣ್ಣ ಆರ್ಕಿಡ್‌ಗಳ ಬಗ್ಗೆ, ಹೂಗಳ ಬಗ್ಗೆ, ಮರಗಳ ಬಗ್ಗೆ ಹೇಳುತ್ತ ಹೇಳುತ್ತ ಆ 'ಪಾಠ' ಮುಗಿಸಿದಾಗ ಅಜ್ಜನ ಕುರಿತು ಹೊಸತೊಂದು ಸಂಗತಿ ನನ್ನಲ್ಲಿ ಅಚ್ಚೊತ್ತಿರುತ್ತಿತ್ತು.



ಅಜ್ಜ ಮುಸಂಡ ಗಿಡವನ್ನು ಸಿಲೋನ್‌ನಿಂದ ತರಿಸಿದ್ದರು.

ಅಣ್ಣ ಪರಿಸರದ ಕುರಿತು ಮಾತನಾಡುವುದೆಂದರೆ ಅಜ್ಜನ ಬಗ್ಗೆಯೇ ವಿವರಣೆ. ಅಜ್ಜನೊಂದಿಗೆ ಅವರು ಬಂಟಮಲೆ ಹತ್ತಿದ್ದು, ವೈಲ್ಡ್ ಆರ್ಕಿಡ್ ಸಂಗ್ರಹಿಸಿದ್ದು, ಗಿಡಗಳನ್ನು ನೋಡುವ - ಅರ್ಥಮಾಡಿಕೊಳ್ಳುವ ಕ್ರಮ, ಅವುಗಳಲ್ಲಿನ ಹತ್ತಾರು ಜಾತಿಗಳು... ಅಣ್ಣನ ಪರಿಸರ ಪಾಠದಿಂದಾಗಿ ಕಾಡಿನಿಂದ ವಾಪಾಸಾಗುವಾಗ ನನ್ನ ಚೀಲದಲ್ಲಿ ಒಂದೆರಡು ವೈಲ್ಡ್ ಆರ್ಕಿಡ್‌ಗಳು;

ಹೊಳೆದಾಟಿ ಬರುವಾಗ ನಾಲ್ಕಾರು ಕಲ್ಲುಗಳು - ಮಂಗಳೂರು ಅಜ್ಜನಿಗಾಗಿ!

ಮರುದಿನ ಬೆಳಿಗ್ಗೆ ನೋಡಿದರೆ ಅಜ್ಜ ಸ್ಟೂಲಲ್ಲಿ ನಿಂತು ಮನೆಯಂಗಳದ ಮಾವಿನ ಮರದ ರೆಂಬೆಗಳ ಸಂದಿಯಲ್ಲಿ ಒಂದಿಷ್ಟು ತೆಂಗಿನ ಸಿಪ್ಪೆಯ ನಾರು ಸೇರಿಸಿ ಆರ್ಕಿಡ್ ಸ್ಥಾಪನೆ ಮಾಡಿರುತ್ತಿದ್ದರು. ಅಷ್ಟೇ ಅಲ್ಲ, ಅದು ಇಂತಹುದೇ ಆರ್ಕಿಡ್; ಹೀಗೆ ಬೆಳೆಯುತ್ತದೆ; ಇಂತಹ ಸಮಯದಲ್ಲಿ ಹೂ ಬಿಡುತ್ತದೆ; ಹೂವಿನ ಬಣ್ಣ, ಗಾತ್ರ ಎಲ್ಲವನ್ನೂ ವಿವರಿಸುತ್ತಿದ್ದರು. ಹೀಗೆ ಅಣ್ಣ ಶುರುಮಾಡಿದ ಪಾಠವನ್ನು ಅಜ್ಜ ಮುಂದುವರಿಸುತ್ತಿದ್ದರು.

### ಆರ್ಕಿಡ್ ಪ್ರೇಮ

ನನಗೂ ಆರ್ಕಿಡ್ ಹುಚ್ಚು ಹಿಡಿಯಲು ಹೆಚ್ಚು ಸಮಯ ಬೇಕಾಗಲಿಲ್ಲ. ಸಾಮಾನ್ಯವಾಗಿ ತಿಂಗಳಲ್ಲಿ ಒಂದು ವಾರ ದಕ್ಷಿಣ ಕನ್ನಡದಲ್ಲಿ, ಒಂದು ವಾರ ಕೊಡಗಿನಲ್ಲಿ ಕ್ಷೇತ್ರಪ್ರಚಾರ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದೆವು. ಹೀಗೆ ಕ್ಯಾಂಪ್ ಮಾಡಿದಾಗಲೆಲ್ಲಾ ನಮ್ಮ ತಿರುಗಾಟದಲ್ಲಿ ಆರ್ಕಿಡ್ ಸಂಗ್ರಹ ಕೂಡ ಒಂದು ಅಜೆಂಡಾ ಎಂಬಂತಾಗಿತ್ತು.

ಪ್ರವಾಸದಿಂದ ವಾಪಾಸಾಗುತ್ತಿದ್ದಾಗ ನಾನು ತರುತ್ತಿದ್ದ ಆರ್ಕಿಡ್‌ಗಳನ್ನು ಅಜ್ಜ ಉಮೇದಿನಿಂದ ಕುಂಡಗಳಲ್ಲೋ, ಮರದ ಗೆಲ್ಲುಗಳಲ್ಲೋ ಪೋಷಿಸುತ್ತಿದ್ದರು. ಆದರೆ ಅವು ಕರಾವಳಿಯ ಹವೆಗೆ ಒಗ್ಗಿಕೊಳ್ಳದೆ ಕ್ರಮೇಣ ಬಾಡಿ ಒಣಗಿಹೋಗುತ್ತಿದ್ದವು. ಇಷ್ಟಾದರೂ ನಮ್ಮ ಆರ್ಕಿಡ್ ಪ್ರೇಮವೇನೂ ಕಡಿಮೆಯಾಗುತ್ತಿರಲಿಲ್ಲ.



ಮಂಗಳೂರು ಮನೆಯಂಗಳದ ಮಾವಿನ ಮರದಲ್ಲಿ ಅಜ್ಜ ಎಲ್ಲಿಂದಲೋ ತಂದು ಕಟ್ಟಿದ್ದ ಆರ್ಕಿಡ್ ಸಾಕಷ್ಟು ಬೆಳೆದು ವರ್ಷಕ್ಕೊಮ್ಮೆ ಹಳದಿ ಬಣ್ಣದ ಆಕರ್ಷಕ ಹೂಗೊಂಚಲು ಅರಳಿಸುತ್ತಿತ್ತು. ಅದು ಹೂಬಿಡುವ ಕಾಲ. ಮಾರ್ಚ್-ಏಪ್ರಿಲ್ ಎಂದು ನೆನಪು. ಆ ಹೂಗಳನ್ನು ಸ್ವಾಗತಿಸಲು ಅಜ್ಜ ಎರಡು ತಿಂಗಳು ಮುಂಚಿತವಾಗಿಯೇ ರೆಡಿಯಾಗುತ್ತಿದ್ದರು. ಅದರಲ್ಲಿ ಮೊಗ್ಗುಗಳು ಮೂಡಿದಾಗಲೇ ಅಜ್ಜ ಕಾಮೆಂಟರಿ ಆರಂಭಿಸುತ್ತಿದ್ದರು. ಹೂಬಿಟ್ಟಾಗಲಂತೂ ಅಜ್ಜನ ಮನಸ್ಸಿನೊಳಗೆಯೇ ಅವು ಅರಳಿವೆಯೆಂಬಂತೆ ಅವರು ಸಂಭ್ರಮಪಡುತ್ತಿದ್ದರು. ಆಗ ಅಜ್ಜ ಮನೆಗೆ ಬಂದವರಿಗೆಲ್ಲ ಆ ಆರ್ಕಿಡ್ ತೋರಿಸಿ ಅವರಲ್ಲೂ ಆರ್ಕಿಡ್ ಬಗ್ಗೆ ಒಲವು ಮೂಡುವಂತೆ ಮಾಡುತ್ತಿದ್ದರು. ಮಾತ್ರವಲ್ಲ ಅವರಿಗೆಲ್ಲ ಹಂಚುವುದಕ್ಕೆಂದೇ ಮಾಡಿಟ್ಟಿರುತ್ತಿದ್ದ ಒಂದಷ್ಟು ಗಿಡಗಳನ್ನು ಹಂಚಿ, 'ನೀವೂ ಬೆಳೆಸಿ' ಎಂದು ಹುರಿದುಂಬಿಸುತ್ತಿದ್ದರು.

ಆರ್ಕಿಡ್‌ಗಳ ಆಕರ್ಷಣೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದ್ದರೂ ಅಜ್ಜನ ಅಕ್ವೇರಿಯಂಗಳು ಮಾತ್ರ ನನ್ನ ಕಣ್ಣಿಗೆ ಬೀಳಲೇ ಇಲ್ಲ. ಆದರೆ ಅಂತಹ ಸಂದರ್ಭ ಅಚಾನಕ್ಕಾಗಿ ಬಂದೊದಗಿತು. ಒಮ್ಮೆ ಅಜ್ಜ ಪುಟ್ಟಪರ್ತಿಗೆ ಹೋಗುವಾಗ 'ಮೀನುಗಳಿಗೆ ಊಟ ಹಾಕುವುದನ್ನು ಮರೆಬೇಡಿ' ಎಂದು ಮೊಮ್ಮಕ್ಕಳಿಗೆ ಹೇಳಿದ್ದರು. ಅಜ್ಜ ಅನ್ನದ ಉಂಡೆ ಮಾಡಿ ಮೀನುಗಳಿಗೆ ಹಾಕುವುದನ್ನಷ್ಟೆ ನೋಡಿದ್ದ ನಾವು (ರಕ್ಷಿತಾ, ನಾನು) ಅನ್ನವನ್ನೇ ನೇರ ಅಕ್ವೇರಿಯಂಗೆ ಹಾಕಿದೆವು. ಮೀನುಗಳಿಗೆ ಆಹಾರ ಕಡಿಮೆಯಾಗದಿರಲಿ ಅಂತ ಒಂದಿಷ್ಟು ಜಾಸ್ತಿಯೇ ಹಾಕಿದೆವು. ಇದರಿಂದಾಗಿ ದುರಂತವೇ ನಡೆದುಹೋಯಿತು. ಮರುದಿನ ಬೆಳಿಗ್ಗೆ ಅಕ್ವೇರಿಯಂ ನೀರೆಲ್ಲ ಬಗ್ಗಡವಾಗಿತ್ತು.

ಮೇಲ್ಭಾಗದಲ್ಲಿ ನಾಲ್ಕಾರು ಮೀನುಗಳು ಜೀವಬಿಟ್ಟು ತೇಲಾಡುತ್ತಿದ್ದವು. ಮೀನು ಸತ್ತದ್ದಕ್ಕಿಂತ 'ಅಜ್ಜ ಏನೆಂದಾರು' ಎಂಬ ಯೋಚನೆ ಬಂದದ್ದೇ ತಡ, ಅಜ್ಜನ ಆತ್ಮೀಯ ಗೆಳೆಯ ರಮೇಶ್‌ಚಂದ್ರ ಹಾರ್ವೆಯವರಿಗೆ ಫೋನ್ ಮಾಡಿ ಪರಿಸ್ಥಿತಿ ವಿವರಿಸಿದೆವು. ಹಾರ್ವೆಯವರ ತಮ್ಮನ ಮಗ ಸುನಿಲ್ ಬಂದು ಉಳಿದ ಮೀನುಗಳನ್ನೂ ನಮ್ಮನ್ನೂ ಒಟ್ಟಿಗೇ ಕಾಪಾಡಿದರು.

'ಮೀನುಗಳು ನೇರ ಅನ್ನವನ್ನೇ ತಿನ್ನುವುದಿಲ್ಲ; ಅಜ್ಜ ಅನ್ನವನ್ನು ಅರೆದು ಅದರೊಂದಿಗೆ 'ಫಿಶ್ ಫುಡ್' ಬೆರೆಸಿ ಹಾಕುತ್ತಿದ್ದರು. ನೀವು ಹೆಚ್ಚಿನ ಪ್ರಮಾಣದಲ್ಲಿ ಅನ್ನ ಹಾಕಿದ್ದರಿಂದ ಅವು ಕೊಳೆತು ನೀರು ಹಾಳಾಗಿ ಮೀನುಗಳು ಉಸಿರುಗಟ್ಟಿ ಸಾಯತೊಡಗಿದವು' ಎಂದು ಸುನಿಲ್ ಪ್ರಾಥಮಿಕ ಪಾಠ ಮಾಡಿ ಅಕ್ವೇರಿಯಂ ಅಂದರೆ ಟಿವಿ ಇಟ್ಟ ಹಾಗೆ ಒಂದೆಡೆ ಇಟ್ಟುಬಿಡುವ ಸಂಗತಿಯಷ್ಟೇ ಅಲ್ಲ ಎಂಬುದನ್ನು ಮನವರಿಕೆ ಮಾಡಿದರು. ಅಜ್ಜ ಪುಟ್ಟಪರ್ತಿಯಿಂದ ವಾಪಾಸಾಗುವಷ್ಟರಲ್ಲಿ ಅಕ್ವೇರಿಯಂಗೆ ಜೀವಕಳೆ ಬಂದಿತ್ತು. ಮೀನ್ಮನೆ ಕುರಿತು ನನ್ನಲ್ಲಿ ಆಸಕ್ತಿ ಮೂಡಿದ್ದು ಈ ಘಟನೆಯಿಂದ.

**ಗುರು - ಶಿಷ್ಯ**

ಅಜ್ಜನ ವಿಶೇಷವೆಂದರೆ, ಯಾರಿಗೇ ಆಗಲಿ ಒಂದು ವಿಷಯದಲ್ಲಿ ಆಸಕ್ತಿಯಿಲ್ಲವೆಂದಾದರೆ ಆ ಕುರಿತು ಅವರಲ್ಲಿ ಪ್ರಸ್ತಾಪವೇ ಮಾಡುತ್ತಿರಲಿಲ್ಲ. ಹಾಗೂ 'ನಾನು ಇಂಥದ್ದು ಮಾಡಿದ್ದೆ' ಅಂತ ಎಂದೂ ತಾವಾಗಿಯೇ ಹೇಳುತ್ತಿರಲಿಲ್ಲ. ಮಾಡಿದ್ದರ ಬಗ್ಗೆ 'ಭಾಷಣ' ಮಾಡುವುದಕ್ಕಿಂತ, ಮಾಡಬೇಕಾದ್ದರ ಬಗ್ಗೆ ಚಿಂತಿಸಿ ಆ ನಿಟ್ಟಿನಲ್ಲಿ ಹೆಜ್ಜೆಯಿಡುವುದಕ್ಕೇ ಅಜ್ಜನ ಆದ್ಯತೆ. ನನ್ನ ಬಳಿ ಅದುವರೆಗೆ ಅವರು ಮಾತಾಡುತ್ತಿದ್ದುದು ಫಿಲಂ - ಪ್ರೊಜೆಕ್ಟರಿನ ಬಗ್ಗೆ; ಆರ್ಕಿಡ್‌ನ ಬಗ್ಗೆ. ಆದರೆ ಅಕ್ವೇರಿಯಂ ಕುರಿತ ಈ ದಿಢೀರ್ ಜ್ಞಾನೋದಯದಿಂದಾಗಿ ಮೀನುಗಳ ಬಗ್ಗೆ ಅಜ್ಜನೊಂದಿಗೆ ಮಾತಿಗಿಳಿದದ್ದೇ ಸರಿ, ಅಜ್ಜ ಗುರು - ನಾನು ಶಿಷ್ಯ.


ರಮೇಶ್‌ಚಂದ್ರ ಹಾರ್ವೆ ಮತ್ತು ಅಜ್ಜ

ಅಕ್ವೇರಿಯಂ ಬಗ್ಗೆ ಅಜ್ಜ ಬರೆದ ಪುಸ್ತಕ - ಅಲಂಕಾರಿಕ ಮೀನುಗಳು ಹಾಗೂ ಈ ಹವ್ಯಾಸದ ಬಗ್ಗೆ ನನ್ನಲ್ಲಿ ಆಸಕ್ತಿ ಕುದುರಿಸಿತು. ಒಂದು ಪ್ರಶ್ನೆಗೆ ಅಜ್ಜ ಹತ್ತು ಉತ್ತರ ನೀಡುತ್ತಿದ್ದರು. ಅಕ್ವೇರಿಯಂ 'ಸೆಟ್' ಮಾಡುವುದರಿಂದ ಹಿಡಿದು ಅದಕ್ಕೆ ಸೂಕ್ತ ಮೀನುಗಳನ್ನು ಬಿಡುವ ವರೆಗೆ ಪ್ರತಿಯೊಂದೂ ಆಸಕ್ತಿಯ ಸಂಗತಿಯೇ. ಮೀನುಗಳ ಜೀವನಕ್ರಮ, ಸ್ವಭಾವ ಕೂಡಾ ಒಂದೇ ತೆರನಾದುದಲ್ಲ. ಮೀನ್ಮನೆಯನ್ನು ಆಕರ್ಷಕವಾಗಿ ವಿನ್ಯಾಸಗೊಳಿಸುವುದು ಒಂದು ಕಲೆಯೂ ಹೌದು. ಅಜ್ಜನ ಪಾಠಕ್ಕೆ ನಾನು ದಂಗಾದೆ. ತಡಮಾಡಲಿಲ್ಲ, ಎರಡಡಿ ಉದ್ದದ ಒಂದು ಪುಟ್ಟ ಮೀನ್ಮನೆ ತಂದು ಕಚೇರಿಯಲ್ಲಿ ಜೋಡಿಸಿಯೇ ಬಿಟ್ಟೆ. ಕೆಲವೇ ದಿನಗಳಲ್ಲಿ ಅದು 'ಬೋರ್' ಅನ್ನಿಸತೊಡಗಿದಾಗ ಮೂರಡಿ ಉದ್ದದ ದೊಡ್ಡ ಅಕ್ವೇರಿಯಂ ಪ್ರತ್ಯಕ್ಷವಾಯಿತು. ಮೀನ್ಮನೆ ಹವ್ಯಾಸದೊಂದಿಗೆ ಹಾರ್ವೆ ಕುಟುಂಬದೊಂದಿಗೂ ನನ್ನ ನಂಟು ಬೆಳೆಯಿತು. ರಮೇಶ್‌ಚಂದ್ರ ಹಾರ್ವೆ ಹಾಗೂ ಸುನಿಲ್ ಇಬ್ಬರಿಗೂ ಮೀನ್ಮನೆಯ ಸಂಗತಿಗಳು ಕರತಲಾಮಲಕ. ಅಕ್ವೇರಿಯಂ ಸೆಟ್ ಮಾಡುವಾಗ ಡ್ರಿಫ್ಟ್‌ವುಡ್ ಬಳಕೆ, ಫಿಲ್ಟರ್‌ಗಳ ಜೋಡಣೆ, ಬಲ್ಬ್‌ಗಳ ಪ್ರಖರತೆ, ಮೀನುಗಳಿಗೆ ನೀಡುವ ಆಹಾರ ಮುಂತಾದ ವಿಚಾರಗಳು ಅಷ್ಟೇನೂ ಸರಳವಲ್ಲ. ಮೀನುಗಳ ಸಂತಾನೋತ್ಪತ್ತಿ ವಿಧಾನವೂ ವಿಭಿನ್ನ. ಏಡುವಾದಾಗಲೆಲ್ಲ



ಮೀನ್ಮನೆ ಹವ್ಯಾಸವನ್ನು ಜನಪ್ರಿಯಗೊಳಿಸಲು ಅಜ್ಜನ ತಲೆಯಲ್ಲಿ ಹತ್ತಾರು ಯೋಜನೆಗಳು.

ನಾನು ಹಾರ್ವೆಯವರಲ್ಲಿಗೆ ಹೋಗುತ್ತಿದ್ದೆ; ಈ ಬಗ್ಗೆ ಚರ್ಚಿಸುತ್ತಿದ್ದೆ.

ಬರಬರುತ್ತ ಅಜ್ಜ ಇನ್ನಷ್ಟು ಹತ್ತಿರವಾಗತೊಡಗಿದರು. ನಮ್ಮ ನಿರ್ದೇಶನಾಲಯದ ವತಿಯಿಂದ ನಡೆಸುತ್ತಿದ್ದ ಕಾರ್ಯಕ್ರಮಗಳ ಬಗ್ಗೆ ಅಜ್ಜ ಖುಷಿಪಡುತ್ತಿದ್ದರು; ಅಭಿಮಾನಪಡುತ್ತಿದ್ದರು; ಹುರಿದುಂಬಿಸುತ್ತಿದ್ದರು. ಜೊತೆಗೆ ತಾವೂ ಇನ್ನಷ್ಟು ಚುರುಕಾಗತೊಡಗಿದರು.

### 'ಅಕ್ವಾ ಫೋರಂ' ಸ್ಥಾಪನೆ




'ಅಕ್ವಾ ಫೋರಂ' ಲಾಂಛನ.

1993ರ ಒಂದು ದಿನ ಅಜ್ಜನ ಪುಟಾಣಿ ಟೈಪ್‌ರೈಟರ್ ಪುರುಸೊತ್ತಿಲ್ಲದೆ ಸದ್ದುಮಾಡುತ್ತಿತ್ತು. ಅಜ್ಜ ಅಕ್ವೇರಿಯಂ ಕುರಿತು ಸಂಘವೊಂದನ್ನು ಹುಟ್ಟುಹಾಕಲು ಸಜ್ಜಾಗುತ್ತಿದ್ದರು. ಟೈಪಿಂಗ್ ಮುಗಿದಾಗ 'ಅಕ್ವಾ ಫೋರಂ' ರಚನೆಯಾಗಿತ್ತು. ಅಜ್ಜನ ಮುಖ್ಯ ಉದ್ದೇಶ ಸ್ಥಳೀಯವಾಗಿ 'ಫಿಶ್ ಬ್ರೀಡಿಂಗ್' (ಮೀನುಗಳ ಸಂತಾನೋತ್ಪತ್ತಿ) ಜನಪ್ರಿಯಗೊಳಿಸುವುದು ಹಾಗೂ ಮಂಗಳೂರಿನಲ್ಲೊಂದು ಮತ್ಸ್ಯಾಗಾರ ಸ್ಥಾಪಿಸುವುದು. ಕೆಲ ದಿನಗಳಲ್ಲಿ ಕ್ಷೇತ್ರಪ್ರಚಾರ ನಿರ್ದೇಶನಾಲಯ, ಅಕ್ವಾ ಫೋರಂ ಜೊತೆಯಾಗಿ ಮೀನುಗಾರಿಕಾ ಕಾಲೇಜಿನಲ್ಲಿ 'ಉಪವೃತ್ತಿಯಾಗಿ ಮೀನ್ಮನೆ ಹವ್ಯಾಸ' ಕುರಿತು ಒಂದು ದಿನದ ಕಾರ್ಯಾಗಾರವನ್ನೂ ಏರ್ಪಡಿಸಿದೆವು. ಸುನಿಲ್‌ಚಂದ್ರ ಹಾರ್ವೆ ಮೀನ್ಮನೆ ಜೋಡಣೆ ಕುರಿತು ಪ್ರಾತ್ಯಕ್ಷಿಕೆ ನಡೆಸಿಕೊಟ್ಟರು.

ಅಜ್ಜ ಅಷ್ಟಕ್ಕೇ ಸುಮ್ಮನಾಗಲಿಲ್ಲ. 'ಅಕ್ವಾ ಫೋರಂ' ಇನ್ನಷ್ಟು ಬಲಗೊಳಿಸಬೇಕೆಂದು ಯೋಚಿಸತೊಡಗಿದರು. ಆಗ ನಾನೆಂದೆ, 'ಇದು ಈ ಪ್ರಾಯದಲ್ಲಿ ನಿಮ್ಮಿಂದ ಮಾತ್ರ ಆಗುವ ಕೆಲಸವಲ್ಲ. ಇನ್ನಷ್ಟು ಆಸಕ್ತರನ್ನು ಸೇರಿಸಿಕೊಂಡು ಮುಂದುವರಿಯುವುದು ಸೂಕ್ತ.' ಅಜ್ಜನ ಉತ್ಸಾಹದಲ್ಲಿ ಒಂದಿನಿತೂ ವ್ಯತ್ಯಾಸವಾಗಲಿಲ್ಲ. 'ಸರಿ ಅದಕ್ಕೊಂದು ಮೀಟಿಂಗ್ ಕರಿ' ಅಂದರು. 'ಅಕ್ವಾ ಫೋರಂ' ವತಿಯಿಂದ ಅಕ್ಟೋಬರ್ 27, 1993ರಂದು ಕೆಲವರಿಗೆ ಪತ್ರ ಹೋಯಿತು. ನವೆಂಬರ್ 8ರಂದು ವುಡ್‌ಲ್ಯಾಂಡ್ಸ್ ಹೋಟೇಲಿನಲ್ಲಿ ಸಭೆಯೂ ಜರುಗಿತು. ಅಜ್ಜ, ಸುನಿಲ್, ಲೆಸ್ಟರ್ ಸಲ್ಡಾನ, ಶಿವಾನಂದ ರಾವ್, ಆನಂದ ಆಳ್ವ, ನಾನು ಸೇರಿ ಎಂಟು ಮಂದಿ. ಅಜ್ಜ ಬೈಲಾ ಸಿದ್ಧಪಡಿಸಿಯೇ ತಂದಿದ್ದರು. 'ಕೆನರಾ ಅಕ್ವೇರಿಯಂ ಅಸೋಸಿಯೇಶನ್' ಅಂತ ಹೆಸರೂ ನಿಗದಿಯಾಯಿತು.

### ಮೀನ್ಮನೆ ಸಂಘ ಉದ್ಘಾಟನೆ

ಜನವರಿ 2, 1994ರಂದು ಅದೇ ಹೊಟೇಲಿನಲ್ಲಿ ಸಂಘದ ಪ್ರಥಮ ಮಹಾಸಭೆ. ಡಾ. ಕೆ.ಎಸ್. ಪ್ರಭಾಕರ ರಾವ್ ಅವರ ಅಧ್ಯಕ್ಷತೆ. ಅಷ್ಟರಲ್ಲಾಗಲೇ ಸಂಘಕ್ಕೆ 80ಕ್ಕೂ ಹೆಚ್ಚು ಮಂದಿ ಸದಸ್ಯರ ನೋಂದಣಿಯಾಗಿತ್ತು. ಅಕ್ವೇರಿಯಂ ಅಸೋಸಿಯೇಶನ್ನಿನ ಮೊದಲ ವರ್ಷಕ್ಕೆ ಅಜ್ಜ ಅಧ್ಯಕ್ಷರಾಗಿ, ಗೋಪಿನಾಥ ಮಲ್ಯ ಕಾರ್ಯದರ್ಶಿಯಾಗಿ ಆಯ್ಕೆಗೊಂಡರು. ಆರು ಮಂದಿ ಕಾರ್ಯಕಾರಿ ಸಮಿತಿ ಸದಸ್ಯರಲ್ಲಿ ನಾನೂ ಒಬ್ಬ. ಅಕ್ವಾ ಫೋರಂ ಲಾಂಛನ ರಚಿಸಿದ್ದ ಮಿತ್ರ ಎಂ.ಜಿ. ಕಜೆ ಹೊಸ ಅಸೋಸಿಯಶನ್ನಿನ ಸುಂದರ ಲಾಂಛನ ವಿನ್ಯಾಸಗೊಳಿಸಿದರು. ಅದೇ ತಿಂಗಳ 23ರಂದು ನಡೆದ ಸಮಾರಂಭದಲ್ಲಿ ಮೀನುಗಾರಿಕಾ ಕಾಲೇಜಿನ ನಿರ್ದೇಶಕ ಡಾ. ಪಿ.ಕೆ. ಸಾಲಿಯಾನ್ ಮೀನ್ಮನೆ ಸಂಘ ಉದ್ಘಾಟಿಸಿದರು.

ಸಂಘ ಆರಂಭವಾದದ್ದೇ ತಡ, ಅಜ್ಜ ಹತ್ತಾರು ಯೋಜನೆಗಳನ್ನು ಮುಂದಿಟ್ಟರು. ಅವುಗಳಿಗೆ ನಾನು ಪ್ರತಿಕ್ರಿಯೆ ವ್ಯಕ್ತಪಡಿಸುವಲ್ಲಿ (ಕೆಲಸದ ಒತ್ತಡ ಭಯದಿಂದ) ಹಿಂದೇಟು ಹಾಕಿದರೆ ಅಜ್ಜ ಮಲ್ಯರಿಗೆ ಫೋನ್ ಮಾಡುತ್ತಿದ್ದರು. ಕೂಡಲೇ ಗೋಪಿ ನನ್ನ ನಂಬರ್ ಡಯಲ್ ಮಾಡುತ್ತಿದ್ದರು!

1994ರ ಫೆಬ್ರವರಿಯಲ್ಲಿ ಮಂಗಳೂರು ಮನೆಯಲ್ಲಿ ಮೀನ್ಮನೆ ನಿರ್ವಹಣೆ ಕುರಿತು ಸಂಘದ ವತಿಯಿಂದ ಪ್ರಾತ್ಯಕ್ಷಿಕೆ ಏರ್ಪಡಿಸಲಾಗಿತ್ತು. ಅದನ್ನು ಸುನಿಲ್ ನಡೆಸಿಕೊಟ್ಟರು. ಮುಂದಿನ ದಿನಗಳಲ್ಲಿ ಪುತ್ತೂರು, ಸುಳ್ಯ ಮುಂತಾದೆಡೆಗಳಲ್ಲಿ ಸುನಿಲ್ ಅಂತಹುದೇ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಮೀನ್ಮನೆ ಹವ್ಯಾಸವನ್ನು ಮಂಗಳೂರಿನ ಹೊರಗೂ ಜನಪ್ರಿಯಗೊಳಿಸಲು ಪ್ರಯತ್ನಿಸಿದರು.



ಕೆನರಾ ಅಕ್ವೇರಿಯಂ ಅಸೋಸಿಯೇಶನ್ನಿನ ಲಾಂಛನ.

ಮೀನ್ಮನೆ ಸಂಘದ ಸದಸ್ಯರಿಗೆ ಗುರುತಿನ ಚೀಟಿ ವಿತರಿಸಿದೆವು. ಅಕ್ವೇರಿಯಂ ಡೀಲರ್‌ಗಳಿಂದ ಮೀನು ಹಾಗೂ ಇತರ ಸಲಕರಣೆಗಳನ್ನು ಖರೀದಿಸುವಾಗ ಸಂಘದ ಐಡಿ ಕಾರ್ಡ್ ತೋರಿಸಿದರೆ ಡಿಸ್ಕೌಂಟ್ ಸಿಗಬೇಕೆಂಬುದು ಅಜ್ಜನ ಉದ್ದೇಶ. ಇದಕ್ಕೆ ಡೀಲರ್‌ಗಳೂ ಸಮ್ಮತಿಸಿದರು. ಇದು ಕಾರ್ಯರೂಪಕ್ಕೆ ಬಂದರೂ ಕೆಲವೊಂದು ಸಮಸ್ಯೆಗಳಿಂದಾಗಿ ಕ್ರಮೇಣ ನಿಂತುಹೋಯಿತು.

### ಹೊಸತಿನತ್ತ ತುಡಿತ

ಆದರೆ ಅಜ್ಜ ಸೋಲುಗಳಿಂದ ವಿಚಲಿತರಾಗುವವರಲ್ಲ. ಸದಾ ಹೊಸತಿನತ್ತ ತುಡಿಯುತ್ತಿದ್ದ ಅವರ ಮನಸ್ಸು ವಿನೂತನ ಯೋಜನೆಗಳನ್ನು ರೂಪಿಸುತ್ತಿತ್ತು. ಗೋಪಿಯೂ ಆಗ ಬಹಳ ಉಮೇದಿನಿಂದಿದ್ದರು. 1994ರ ಏಪ್ರಿಲ್‌ನಲ್ಲಿ ಕುದುರೆಮುಖದ ಹನುಮನಗುಂಡಿಗೆ ಮೀನ್ಮನೆ ಸಂಘ ಪಿಕ್‌ನಿಕ್ ಏರ್ಪಡಿಸಿತ್ತು. (ಮುಂದೆ ಹೆಬ್ರಿಗೂ ಇಂತಹುದೇ ಪ್ರವಾಸ ಹಮ್ಮಿಕೊಳ್ಳಲಾಗಿತ್ತು.) ಹೊಳೆಯಲ್ಲಿನ ಮೀನುಗಳನ್ನು ಗುರುತಿಸುವುದು, ಮೀನ್ಮನೆಗೆ ಬೇಕಾದ ಕಲ್ಲು, ಡ್ರಿಫ್ಟ್‌ವುಡ್, ಜಲಸಸ್ಯಗಳ ಸಂಗ್ರಹ ಈ ಪ್ರವಾಸದ ಉದ್ದೇಶ. ಪಿಕ್‌ನಿಕ್ ಮುಗಿಯುತ್ತಿದ್ದಂತೆ ಮೀನುಗಾರಿಕಾ ಕಾಲೇಜಿನಲ್ಲಿ ಅಕ್ವೇರಿಯಂ ಫಿಶ್ ಬ್ರೀಡಿಂಗ್ ಕುರಿತು ತರಬೇತಿ; ಅದಾದ ಕೂಡಲೇ ಮೀನ್ಮನೆ ಜೋಡಣೆಯಲ್ಲಿ ಮಂಗಳೂರು ನಗರ ಮಟ್ಟದ ಸ್ಪರ್ಧೆ... ಅಜ್ಜನ ಪಟ್ಟಿಗೆ ಪೂರ್ಣವಿರಾಮವೇ ಇರಲಿಲ್ಲ; ಅಲ್ಪ ವಿರಾಮವೂ ಇರಲಿಲ್ಲ.

ನಮ್ಮೊಂದಿಗೆ ನನ್ನ ಸಹೋದ್ಯೋಗಿಗಳೂ ಮೀನ್ಮನೆ ನಿರ್ವಹಣೆಯಲ್ಲಿ ಆಸಕ್ತಿ ತಳೆದದ್ದು ಮಾತ್ರವಲ್ಲ; ಹವ್ಯಾಸಿ ಆಗಿಬಿಟ್ಟರು. ಎ.ಕೆ. ವಿಜಯ್, ಶ್ರೀನಿವಾಸ್, ರತ್ನಂ ತಮ್ಮ ಮನೆಗಳಲ್ಲಿ ಮೀನ್ಮನೆ ಇಟ್ಟಿದ್ದರು. ಅಲ್ಲಿಯವರೆಗೆ ಪ್ರವಾಸದ ಸಂದರ್ಭದಲ್ಲಿ ಆರ್ಕಿಡ್ ಮಾತ್ರ ಸಂಗ್ರಹಿಸುತ್ತಿದ್ದ ಶ್ರೀನಿವಾಸ್, ಕನಕರತ್ನಂ ಮತ್ತು ನಾನು ಮೀನಿನ ಸಹವಾಸದಿಂದಾಗಿ ಕಲ್ಲು, ಡ್ರಿಫ್ಟ್‌ವುಡ್, ಜಲಸಸ್ಯ ಮುಂತಾದವುಗಳನ್ನು ಸಂಗ್ರಹಿಸುವುದಕ್ಕೆ ಆರಂಭಿಸಿದೆವು. ಹೀಗೆ ನಮ್ಮ ಜೀಪಿನೊಳಗೆ ಪ್ರೊಜೆಕ್ಟರ್, ಫಿಲಂ ಡಬ್ಬಿಗಳ ಸಂದಿಯಲ್ಲಿ ಆರ್ಕಿಡ್‌ಗಳೂ, ಕಲ್ಲುಗಳೂ ಸ್ಥಾನ ಪಡೆದುಕೊಂಡವು. ಅನೇಕ ಊರುಗಳಲ್ಲಿ ನಮ್ಮ ಜೀಪಿನೊಳಗೆ ಇಣುಕಿದ ಸ್ಥಳೀಯರು, ಪ್ರವಾಸಿ ಬಂಗಲೆಯ ಸಿಬ್ಬಂದಿ ಕುತೂಹಲದಿಂದ ಪ್ರಶ್ನಿಸುತ್ತಿದ್ದರು 'ಇವನ್ನೆಲ್ಲ ಏನು ಮಾಡುತ್ತೀರಿ?'



ಪಿಕ್‌ನಿಕ್ ಸಂದರ್ಭದಲ್ಲಿ ಡ್ರಿಫ್ಟ್‌ವುಡ್ ಸಂಗ್ರಹ.

ಅಜ್ಜನಿಂದಾಗಿ ಹೊಸ ಹವ್ಯಾಸದ ಪರಿಚಯ ಮಾತ್ರವಲ್ಲ; ಹೊಸ ಗೆಳೆಯರ ಒಡನಾಟವೂ ಸಿಕ್ಕಿದ್ದು ನನ್ನ ಅದೃಷ್ಟವೇ ಸರಿ. ಅಜ್ಜನ ಅನೇಕ ಗೆಳೆಯರು ನನಗೆ ಪರಿಚಯವಾದರೆ, ನನ್ನ ಗೆಳೆಯರು ಅಜ್ಜನಿಗೆ ಹತ್ತಿರವಾದದ್ದೂ ಹೌದು.

ಮೀನ್ಮನೆ ಸಂಘಕ್ಕೆ ಸಂಬಂಧಿಸಿದ ಅನೇಕ ಚಟುವಟಿಕೆಗಳಲ್ಲಿ ಅಜ್ಜನ ಜೊತೆಗೂಡಿ ಕೆಲಸ ಮಾಡಿದ್ದರಿಂದಾಗಿ ಅಜ್ಜನ ವ್ಯಕ್ತಿತ್ವ ನನಗೆ ಇನ್ನಷ್ಟು ಸ್ಪಷ್ಟವಾಗತೊಡಗಿತು. ಮೀಟಿಂಗ್‌ಗಳಿಗೆ ಅಜ್ಜ ಬರುವಾಗ ಯಾವುದಾದರೊಂದು ಹೊಸ ಯೋಜನೆ ಇದ್ದೇ ಇರುತ್ತಿತ್ತು. ಜೊತೆಗೆ ಅದನ್ನು ಪ್ರಸ್ತಾಪ ಮಾಡುವ ಮೊದಲು ಆ ಕುರಿತು ಸಾಕಷ್ಟು ಹೋಂವರ್ಕ್ ಮಾಡಿಕೊಂಡೇ ಬರುತ್ತಿದ್ದರು. ಇದರಿಂದಾಗಿ ಅಜ್ಜನ ಪ್ರಸ್ತಾಪವನ್ನು ಬದಿಗಿಡುವುದಾಗಲೀ ವಿರೋಧಿಸುವುದಾಗಲೀ ಸಾಧ್ಯವಾಗುತ್ತಿರಲಿಲ್ಲ. ಇವೆಲ್ಲಕ್ಕಿಂತ ಮಿಗಿಲಾಗಿ ಅಜ್ಜನ ಉದ್ದೇಶ ಹಾಗೂ ಅವರ ಕಾಳಜಿ ಪ್ರಶ್ನಾತೀತವಾದ್ದರಿಂದ ಅವರ ಅಭಿಪ್ರಾಯಗಳನ್ನು ಅಲ್ಲಗಳೆಯುವಂತೆಯೇ ಇರಲಿಲ್ಲ.

**ಯಶಸ್ವಿ 'ಅಕ್ವಾ ಮಂಗಳಾ'**

ಅಷ್ಟರಲ್ಲಿ ಮೀನುಗಾರಿಕಾ ಕಾಲೇಜು ತನ್ನ ಬೆಳ್ಳಿಹಬ್ಬದ ಅಂಗವಾಗಿ ಮಂಗಳೂರಿನ ನೆಹರೂ ಮೈದಾನಿನಲ್ಲಿ 10 ದಿನಗಳ 'ಮತ್ಸ್ಯವಿಜ್ಞಾನ ಮೇಳ' ಏರ್ಪಡಿಸುವುದಾಗಿ ಪ್ರಕಟಣೆ ನೀಡಿತ್ತು. ಕೂಡಲೇ ಅಜ್ಜ ಚುರುಕಾದರು. ನಮ್ಮ ಸಂಘ ಕೂಡ ಅದರಲ್ಲಿ ಪಾಲ್ಗೊಳ್ಳಬೇಕೆಂಬ ವಿಚಾರ ಮುಂದಿಟ್ಟರು. ಎಡೆಬಿಡದ ಕಾರ್ಯಕ್ರಮಗಳಿಂದಾಗಿ ಸುಸ್ತಾಗಿದ್ದ ನಾನು ಮತ್ಸ್ಯಮೇಳದಲ್ಲಿ ಭಾಗವಹಿಸುವ ಬಗ್ಗೆ ಆರಂಭದಲ್ಲೇ ಅಪಸ್ವರ ಎತ್ತಿದೆ. ಅಜ್ಜ ಗೋಪಿಯ ಬೆನ್ನು ಹಿಡಿದರು. ಗೋಪಿಗೂ ಉಮೇದಿತ್ತು. ಸುನಿಲ್ ಕೂಡಾ ಸೈ ಅಂದದ್ದರಿಂದ ಡಿಸೆಂಬರ್ 24, 1994ರಂದು ಆರಂಭವಾದ ಮೇಳದಲ್ಲಿ ನಮ್ಮ ಬೃಹತ್ ಮಳಿಗೆ - 'ಅಕ್ವಾ ಮಂಗಳಾ' ಸಜ್ಜಾಯಿತು. ಸುನಿಲ್, ಲೆಸ್ಟರ್ ಸಲ್ದಾನ ಮತ್ತು ಗೋಪಿ ಇಪ್ಪತ್ತಕ್ಕೂ ಹೆಚ್ಚು ಮೀನ್ಮನೆಗಳನ್ನು ಸರ್ವಾಂಗ ಸುಂದರವಾಗಿ ಜೋಡಿಸಿದ್ದರು. ಎಂ.ಜಿ. ಕಜೆಯ 'ಕೈಚಳಕ'ದಿಂದಾಗಿ ಇಡೀ ಮಳಿಗೆ ಇನ್ನಷ್ಟು ಆಕರ್ಷಕವಾಗಿ ರೂಪುಗೊಂಡಿತು. ದೊಡ್ಡವರಿಗೆ ರೂ.2, ಮಕ್ಕಳಿಗೆ ರೂ.1 ಪ್ರವೇಶ ದರ ನಿಗದಿ ಮಾಡಿದೆವು. ಪ್ರದರ್ಶನ ಆರಂಭವಾಗಿಯೇ ಬಿಟ್ಟಿತ್ತು. ಶುರುವಿನಲ್ಲಿ ವೀಕ್ಷಕರ ಪ್ರತಿಕ್ರಿಯೆಗಿಂತ ನಮ್ಮ ಸಂಭ್ರಮವೇ ಹೆಚ್ಚಾಗಿತ್ತು.

ಟಿಕೆಟ್ ಮಾರುವುದರಿಂದ ಹಿಡಿದು ಮೀನುಗಳ ಸುರಕ್ಷತೆ ವರೆಗೆ ಹತ್ತೆಂಟು ಹೊಣೆಗಾರಿಕೆ. ಗೋಪಿ, ಸುನಿಲ್, ನಾನು ಟಿಕೆಟ್ ಮಾರಾಟಕ್ಕಿಳಿದೆವು. ಸಾರ್ವಜನಿಕರಿಂದ ಭರ್ಜರಿ ಪ್ರತಿಕ್ರಿಯೆ. ಮಳಿಗೆಯಲ್ಲಿ ನಿರಂತರ ಜನಸಂದಣಿ. ನಮಗೆಲ್ಲರಿಗೂ ಖುಷಿ. ಆದರೆ ರಾತ್ರಿಯಾಗುತ್ತಿದ್ದಂತೆ ಸಮಸ್ಯೆಯೊಂದು ಎದುರಾಯಿತು. ಬೆಳಿಗ್ಗೆಯವರೆಗೆ ಅಕ್ವೇರಿಯಂಗಳನ್ನು ಕಾಯುವವರು ಯಾರು? ಮೀನ್ಮನೆಯಲ್ಲಿ ದುಬಾರಿ ಮೀನುಗಳಿದ್ದುದರಿಂದ ಮಳಿಗೆಯನ್ನು ಅಂತೆಯೇ ಬಿಡುವಂತಿರಲಿಲ್ಲ. ಅನಿವಾರ್ಯವಾಗಿ ಆ ರಾತ್ರಿ ನಾನು ಮಳಿಗೆಯಲ್ಲೇ ಮಲಗಬೇಕಾಯ್ತು.


ಅಕ್ವಾ ಮಂಗಳಾ : ನಿರೀಕ್ಷೆಗೂ ಮೀರಿದ ಯಶಸ್ಸು.

ನೆಹರೂ ಮೈದಾನದ ಧೂಳು, ಸೊಳ್ಳೆಗಳ ಕಡಿತದ ನಡುವೆ ಬೆಳಗು ಮಾಡುವಷ್ಟರಲ್ಲಿ ನಾನು ಹೈರಾಣಾಗಿದ್ದೆ. ಹಿಂದಿನ ದಿನದ ಉತ್ಸಾಹ ಭೂಮಿಗಿಳಿದಿತ್ತು. ಅಜ್ಜ ಬರುತ್ತಿದ್ದಂತೆ ಗೊಣಗಿಯೇ ಬಿಟ್ಟೆ. ಇಂಥದ್ದಕ್ಕೆಲ್ಲ ಅಜ್ಜನದ್ದು ಯಾವಾಗಲೂ ರೆಡಿಮೇಡ್ ಉತ್ತರ: 'ಡೋಂಟ್ ವರಿ ಮ್ಯಾನ್; ಎವೆರಿಥಿಂಗ್ ವಿಲ್ ಬಿ ಆಲ್‌ರೈಟ್' (ಚಿಂತಿಸಬೇಡ: ಎಲ್ಲ ಸರಿಹೋಗುತ್ತದೆ).

ರಾತ್ರಿ ಮಳಿಗೆ ಮುಚ್ಚುವ ಸಮಯ. ಸಂಜೆ ಮನೆಗೆ ತೆರಳಿದ್ದ ಅಜ್ಜ ಆ ವೇಳೆಗೆ ಪ್ರತ್ಯಕ್ಷ. ಕೈಯಲ್ಲಿ ಯಾವತ್ತಿನ ನೈಲಾನ್ ಚೀಲ. ಸೊಳ್ಳೆ ಪರದೆ ಹೊರತೆಗೆದವರೇ 'ಇಂದು ನಾನು ಮಲಗುತ್ತೇನೆ' ಎಂದರು! ನನ್ನ ಪಾಲಿಗೆ ಅದು ಅತ್ಯಂತ ದೊಡ್ಡ ಶಾಕ್. ಅರೆಕ್ಷಣ ಏನು ಹೇಳುವುದೆಂದೇ ತೋಚಲಿಲ್ಲ.

ನನ್ನ ಸಮಸ್ಯೆಗೆ (ನನಗಾಗ 28 ವರ್ಷ) ಅಜ್ಜ (82 ವರ್ಷ) ಈ ರೂಪದಲ್ಲಿ ಮುಂದಿಟ್ಟ ಪರಿಹಾರ ಎಂದೂ ಮರೆಯಲಾಗದ್ದು. ಅಷ್ಟರಲ್ಲಿ ಗೋಪಿ ಅದೆಲ್ಲಿಂದಲೋ ಸೆಕ್ಯೂರಿಟಿಯೊಬ್ಬನನ್ನು ಗೊತ್ತುಮಾಡಿ ಬಂದಿದ್ದರು. ಮಳಿಗೆ ಕಾವಲು ಕಾಯುವ ಸಮಸ್ಯೆ ಅಲ್ಲಿಗೆ ಬಗೆಹರಿಯಿತು. ಜೊತೆಗೆ ನನ್ನ ಒಳಗಣ್ಣು ತೆರೆಯಿತು. ಇಂತಹ ಶ್ರದ್ಧೆ, ಛಲ, ತ್ಯಾಗದ ಮನೋಭಾವ ಇಲ್ಲದಿದ್ದರೆ ಅಜ್ಜ ಅಷ್ಟೆಲ್ಲ ಸಂಘ ಸಂಸ್ಥೆ, ಹವ್ಯಾಸಗಳನ್ನು ಬೆಳೆಸುವುದು ಖಂಡಿತ ಸಾಧ್ಯವಾಗುತ್ತಿರಲಿಲ್ಲ.



ಅಕ್ವಾ ಮಂಗಳಾ ಮಳಿಗೆಯ ಎದುರು ಅಜ್ಜ.

'ಅಕ್ವಾ ಮಂಗಳಾ' ನಿರೀಕ್ಷೆಗೂ ಮೀರಿ ಯಶಸ್ಸು ಗಳಿಸಿತು. ಜನವರಿ 4, 1995ರಂದು ನಡೆದ ಮತ್ಸ್ಯ ವಿಜ್ಞಾನ ಮೇಳದ ಸಮಾರೋಪ ಸಮಾರಂಭದಲ್ಲಿ ನಮ್ಮ ಮಳಿಗೆಗೆ ಮೊದಲ ಬಹುಮಾನ ಪ್ರಕಟವಾಯಿತು. ಇಡೀ ಪ್ರದರ್ಶನದಿಂದ ಮೀನ್ಮನೆ ಸಂಘಕ್ಕೆ ರೂ. 30 ಸಾವಿರಕ್ಕೂ ಹೆಚ್ಚು ಉಳಿತಾಯವಾಯಿತು. ಈ ಪ್ರದರ್ಶನದಿಂದ ನಾವೆಲ್ಲರೂ ಅನೇಕ ಹೊಸ ಸಂಗತಿಗಳನ್ನು ಕಲಿಯುವಂತಾಯಿತು. ಅಜ್ಜನೂ ತುಂಬ ಸಂತೋಷಪಟ್ಟರು. ಅವರ ದೊಡ್ಡದೊಂದು ಕನಸು ನನಸಾದಂತಿತ್ತು.




ಪ್ರೊ. ಕೆ.ವಿ. ನಾಗರಾಜ್ ಅವರಿಂದ 'ಅಕ್ವೇರಿಯ' ಬಿಡುಗಡೆ

'ಅಕ್ವೇರಿಯ' ಪ್ರಕಟಣೆ

ಎರಡನೇ ವರ್ಷವೂ ಅಜ್ಜನೇ ಅಕ್ವೇರಿಯಂ ಅಸೋಸಿಯೇಶನ್ನಿನ ಅಧ್ಯಕ್ಷರಾದರು. ಆಗ ಅಜ್ಜ ಇನ್ನೊಂದು ಯೋಜನೆ ಮುಂದಿಟ್ಟರು. 'ಅಕ್ವೇರಿಯಂ ಬಗ್ಗೆ ನಾವೊಂದು ವಾರ್ತಾಪತ್ರ ಹೊರಡಿಸಬಾರದೇಕೆ?' ಸರಿ, ಅದಕ್ಕೆ ತಯಾರಿ ಆರಂಭವಾಯಿತು. ಸಂಪಾದಕತ್ವದ ಹೊಣೆ ನನ್ನ ಮೇಲೆ. ಎರಡು ವರ್ಷಗಳ ಹಿಂದೆ ಅಕ್ವೇರಿಯಂ ನೋಡುವುದೂ ಗೊತ್ತಿರದಿದ್ದ ನಾನು ಅಷ್ಟರಲ್ಲಿ ಆ ವಿಷಯದ ಮೇಲಿನ ವಾರ್ತಾಪತ್ರದ ಸಂಪಾದಕನಾದುದು ಅಚ್ಚರಿಯೇ ಸರಿ. ಮಾರ್ಚ್ 17, 1996ರಂದು ವುಡ್‌ಲ್ಯಾಂಡ್ಸ್‌ನಲ್ಲಿ ನಡೆದ ಸಮಾರಂಭದಲ್ಲಿ ನನ್ನ ಗುರುಗಳಾದ ಪ್ರೊ. ಕೆ. ವಿ. ನಾಗರಾಜ್ 'ಅಕ್ವೇರಿಯ'ದ ಮೊದಲ ಸಂಚಿಕೆಯನ್ನು ಬಿಡುಗಡೆ ಮಾಡಿದರು. ಅದೇ ದಿನ ನಡೆದ ಮೀನ್ಮನೆ ಸಂಘದ ವಾರ್ಷಿಕ ಮಹಾಸಭೆಯಲ್ಲಿ ಡಾ. ಮಹಮ್ಮದ್ ಉಸ್ಮಾನ್ ಪಾಷಾ ಅವರು ಸಂಘದ ನೂತನ ಅಧ್ಯಕ್ಷರಾಗಿ ಆಯ್ಕೆಯಾದರು. ಅಜ್ಜ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಮುಂದುವರಿದರು.


AQUARIA 1

MARCH

A QUARTERLY JOURNAL BY KANARA AQUARIUM ASSOCIATION, MANGALORE

SETTING UP AN AQUARIUM

'ಅಕ್ವೇರಿಯ'ದ ಮೊದಲ ಸಂಚಿಕೆ.

ಡಾ. ಪಾಷಾ ಅವರ ಅವಧಿಯಲ್ಲಿ 'ಅಕ್ವೇರಿಯ'ದ ಪ್ರಕಟಣೆ ಮುಂದುವರಿಯಿತು. ಇಂಗ್ಲಿಷ್ - ಕನ್ನಡ ಎರಡೂ ಭಾಷೆಗಳಲ್ಲಿ ಲೇಖನಗಳನ್ನು ಒಳಗೊಂಡಿದ್ದ ಈ ವಾರ್ತಾಪತ್ರದ ಮೂರು ಸಂಚಿಕೆಗಳು ಪ್ರಕಟವಾದವು. (ನಂತರ ನಾನು ಧಾರವಾಡಕ್ಕೆ ಬಂದದ್ದರಿಂದ ವಾರ್ತಾಪತ್ರ ಮುಂದುವರಿಸುವುದು ಸಾಧ್ಯವಾಗಲಿಲ್ಲ.)

ಈ ಮಧ್ಯೆ, ನಾವು ಕೆಲವು ಗೆಳೆಯರು ಸೇರಿಕೊಂಡು ಮಂಗಳೂರಿನಲ್ಲಿ 'ಕೊಲಾಜ್' ಬಳಗ ರಚಿಸಿಕೊಂಡಿದ್ದೆವು. ಆಗಾಗ ಸಾಹಿತ್ಯ-ಕಲೆ-ಮಾಧ್ಯಮಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ನಡೆಸುತ್ತಿದ್ದೆವು. ನಮ್ಮೆಲ್ಲ ಕಾರ್ಯಕ್ರಮಗಳಿಗೆ ಅಜ್ಜ ತಪ್ಪದೇ ಬರುತ್ತಿದ್ದರು. ಅಜ್ಜನಿಗೆ ಯಾವುದರಲ್ಲಿ ತಾನೆ ಆಸಕ್ತಿಯಿದ್ದಿಲ್ಲ? ಬಹುಬೇಗನೆ ಅಜ್ಜ ನನ್ನೆಲ್ಲ ಗೆಳೆಯರಿಗೂ ಆತ್ಮೀಯ 'ಅಜ್ಜ'ನಾದರು. ಸದಾ ಎಲ್ಲ ಪ್ರಚಲಿತ ಸಂಗತಿಗಳ ಕುರಿತು 'ಅಪ್‌ಡೇಟ್' ಆಗಿರುತ್ತಿದ್ದ ಅಜ್ಜ ಎಂದೂ 'ಔಟ್‌ಡೇಟೆಡ್' ಆಗಲೇ ಇಲ್ಲ.

ನಮ್ಮ ಕಚೇರಿಯ ವತಿಯಿಂದ ನಡೆಸುತ್ತಿದ್ದ ಕಾರ್ಯಕ್ರಮಗಳಿಗೂ ಅಜ್ಜ ಹಾಜರ್. ಅಜ್ಜನ ಪ್ರೀತಿ, ಪ್ರೋತ್ಸಾಹದ ದ್ಯೋತಕವದು. ಯಾವುದೇ ಕಾರ್ಯಕ್ರಮಕ್ಕೆ ಬರುವಾಗ ಅಜ್ಜ ನಿಗದಿತ ವೇಳೆಗಿಂತ ಸಾಕಷ್ಟು ಮುಂಚಿತವಾಗಿಯೇ ಬರುತ್ತಿದ್ದರು. ಇದರಿಂದ ಅಜ್ಜನಿಗೆ ಆಯಾಸವಾಗದಿರಲಿ ಎಂದು ಕಾರ್ಯಕ್ರಮದ ಸಮಯವನ್ನು ಸ್ವಲ್ಪ ತಡವಾಗಿ ಹೇಳಿ ಅವರನ್ನು

ನಂಬಿಸಲು ಪ್ರಯತ್ನಿಸಿದ್ದುಂಟು. ಆದರೆ ಅಜ್ಜ ಅಂಥದ್ದರಲ್ಲಿ ತುಂಬ ಸೂಕ್ಷ್ಮ. 'ಅಯ್ಯಯ್ಯ' ಎಂದು ನಕ್ಕುಬಿಡುತ್ತಿದ್ದರು.

**ಕ್ಯಾಮರಾ ಎದುರಿಸಿದಾಗ -**

ನನ್ನ ಹಿರಿಯಕ್ಕನಂತಿರುವ ಸತ್ಯಾ ಎಸ್. ಒಮ್ಮೆ ದೂರದರ್ಶನದ 'ಅವಲೋಕನ' ಕಾರ್ಯಕ್ರಮಕ್ಕಾಗಿ ಒಂದು ಸಾಕ್ಷ್ಯಚಿತ್ರ ನಿರ್ಮಿಸಹೊರಟಿದ್ದರು. ಕಲ್ಲಡ್ಕದ ಗಾರುಡಿ ಗೊಂಬೆಗಳು, ಧರ್ಮಸ್ಥಳದ ಊಟದ ವ್ಯವಸ್ಥೆ, ಬೆಂದ್ರ್‌ತೀರ್ಥ ಹಾಗೂ ಅಜ್ಜ - ಈ ನಾಲ್ಕು ವಿಷಯಗಳ ಕುರಿತು ಒಂದು ಸಂಚಿಕೆ ಸಿದ್ಧಪಡಿಸಲು ನಿರ್ಧರಿಸಿದ್ದರು. ಅಜ್ಜ ಅದಕ್ಕೆ ಸಂತೋಷದಿಂದ ಒಪ್ಪಿದರು. ಮೊದಲು 'ಅಜ್ಜ ಮತ್ತು ಮೀನು' ಈ ಕುರಿತು ಹಾರ್ವೆಯವರಲ್ಲಿ ಶೂಟಿಂಗ್ ಮುಗಿಸಿದೆವು. ನಂತರ 'ಅಜ್ಜ ಮತ್ತು ಜೇನು' ಕುರಿತು ಶೂಟಿಂಗ್ ನಡೆದದ್ದು ನಮ್ಮ ಮನೆ ಕಟ್ಟದಮಜಲಿನಲ್ಲಿ. ಅಜ್ಜ ನಮ್ಮೊಡನೆ ಊರಿಗೆ ಬಂದು ಚಿತ್ರೀಕರಣದಲ್ಲಿ ಪಾಲ್ಗೊಂಡದ್ದು ಮಾತ್ರವಲ್ಲ, ವಾಪಾಸಾಗುವಾಗ ಬೆಂದ್ರ್‌ತೀರ್ಥಕ್ಕೂ ಬಂದಿದ್ದರು.



'ಅವಲೋಕನ'ಕ್ಕಾಗಿ 'ಶ್ರೀ ನಿಲಯ'ದಲ್ಲಿ ಚಿತ್ರೀಕರಣ.

ಅಜ್ಜನ ವಿಶೇಷವೆಂದರೆ ಅವರು ತಮ್ಮ ಅಭಿರುಚಿ, ಹವ್ಯಾಸಗಳಲ್ಲಿ ಕೊನೆಯವರೆಗೂ ಒಂದೇ ಸಮನಾದ ಆಸಕ್ತಿ ಉಳಿಸಿಕೊಂಡಿದ್ದರು. ಯಾವುದನ್ನೂ ಬಿಡಲಿಲ್ಲ. ಅನೇಕರು ಯಾವುದಾದರೊಂದು ಕಹಿ ಅನುಭವ ದಿಂದಾಗಿಯೋ ಅಥವಾ ಇನ್ನಾವುದೇ ಸಮಸ್ಯೆಯಿಂದಾಗಿಯೋ ಹವ್ಯಾಸಕ್ಕೆ ವಿದಾಯ ಹೇಳುವುದಿದೆ. ಆದರೆ ಅಜ್ಜ ಇದಕ್ಕೆ ಅಪವಾದ. ಮಾತ್ರವಲ್ಲ ತಮ್ಮ ಹವ್ಯಾಸಗಳತ್ತ ಸದಾ ಹೊಸನೋಟ ಗಳನ್ನು ಬೀರುತ್ತ, ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತ ಹವ್ಯಾಸಕ್ಕೆ ಹೊಸ ಆಯಾಮ ತಂದುಕೊಡಲು ಪ್ರಯತ್ನಿಸುತ್ತಿದ್ದರು. ಈ ಕಾರಣಕ್ಕಾಗಿ ಯಾವ ಹವ್ಯಾಸವೂ ಅಜ್ಜನಿಗೆ 'ಬೋರ್' ಅಂತ ಅನ್ನಿಸಲಿಲ್ಲ. ಜೇನು, ಮೀನು, ಗಾರ್ಡನ್, ಪ್ರೊಜೆಕ್ಟರ್, ಸ್ಟಾಂಪ್... ಇವೆಲ್ಲವುಗಳಲ್ಲಿ ಅಜ್ಜನ ಪ್ರಯೋಗಶೀಲತೆ ಮಂಕಾದದ್ದಿಲ್ಲ.

**ಅಜ್ಜನ ಗ್ರೇಟ್‌ನೆಸ್**

ಅಜ್ಜನ ಈ ಸ್ವಭಾವದ ಅರಿವಿಲ್ಲದ ನಾನು ಕೆಲವೊಮ್ಮೆ 'ಹೊಸ ಐಡಿಯಾ' ಹೇಳಬೇಕೆಂದುಕೊಂಡರೆ ಅಜ್ಜ ಅದನ್ನು ಅನೇಕ ವರ್ಷಗಳ ಹಿಂದೆಯೇ ಮಾಡಿರುತ್ತಿದ್ದರು! ಅಜ್ಜ ಮಾಡಿದ್ದ ಅಂತಹ ಪ್ರಯತ್ನಗಳನ್ನು ಅವರು ತಾವಾಗಿಯೇ ಹೇಳಿಕೊಳ್ಳುತ್ತಿರಲಿಲ್ಲವಾದ್ದರಿಂದ ಅಜ್ಜನನ್ನು ಬಲ್ಲ ಇತರರಿಂದ ನಾನು ವಿವರ ಪಡೆಯಬೇಕಾಗುತ್ತಿತ್ತು. ಉದಾಹರಣೆಗೆ, ಅಜ್ಜ ರಾಕ್ ಗಾರ್ಡನ್ ರೂಪಿಸಿದ್ದ, ಲವ್ ಬರ್ಡ್ಸ್ ಸಾಕಿದ್ದ ವಿಚಾರ ನನಗೆ ಮೊದಲು ಹೇಳಿದ್ದು ಅಣ್ಣ ಜಿ. ಎಸ್. ಇನ್ನೂ ವಿಶೇಷವೆಂದರೆ ರಾಕ್ ಗಾರ್ಡನ್ ಮಾಡುತ್ತಿರುವ, ಲವ್ ಬರ್ಡ್ಸ್ ಸಾಕುತ್ತಿರುವ ಯಾರಾದರೂ ಬಂದರೆ ಅಜ್ಜ ಆ ಹವ್ಯಾಸದ ಕುರಿತು ಏನೂ ತಿಳಿಯದವರಂತೆ (ನಿಜಕ್ಕೂ!) ಬಂದವರ ಅನುಭವ ಕೇಳುತ್ತಿದ್ದರು; ಖುಷಿಪಡುತ್ತಿದ್ದರು. ಎಲ್ಲೂ ತಮಗಾದ ಕಹಿ ಅನುಭವವನ್ನು

ಹೇಳಿ ಇನ್ನೊಬ್ಬರ ಉತ್ಸಾಹಕ್ಕೆ ತಣ್ಣೀರೆರಚುತ್ತಿರಲಿಲ್ಲ. ಒಂದು ವೇಳೆ ಅಂಥದ್ದೇನಾದರೂ ಪ್ರಸ್ತಾಪಿಸಲೇ ಬೇಕೆನಿಸಿದರೆ ಹಾಸ್ಯದ ರೂಪದಲ್ಲಿ ಸೂಚ್ಯವಾಗಿ ಹೇಳುತ್ತಿದ್ದರು.

ಗೊತ್ತಿಲ್ಲದ್ದನ್ನು ಗೊತ್ತಿದೆಯೆಂದು ತೋರಿಸಿಕೊಳ್ಳುವ ಈ ದಿನಗಳಲ್ಲಿ ಗೊತ್ತಿದ್ದೂ ಗೊತ್ತಿಲ್ಲದಂತಿದ್ದುದೇ ಅಜ್ಜನ 'ಗ್ರೇಟ್‌ನೆಸ್'.

ಅಜ್ಜನ ಬಾಹ್ಯ ಸಾಧನೆಯಷ್ಟೇ ಆಂತರಿಕ ಸಾಧನೆಯೂ ಗಟ್ಟಿಯಾಗಿದ್ದುದರಿಂದಲೇ ಅವರಲ್ಲಿ ಸಕಾರಾತ್ಮಕ ಶಕ್ತಿ ಸದಾ ಜಾಗೃತವಾಗಿರುತ್ತಿತ್ತು. ಇದನ್ನು ಅಜ್ಜ ಪ್ರಜ್ಞಾಪೂರ್ವಕವಾಗಿ ಮೈಗೂಡಿಸಿಕೊಂಡಿದ್ದರು ಅಂತ ನನಗನ್ನಿಸುವುದಿಲ್ಲ. ಅಜ್ಜನಲ್ಲಿ ಸಹಜವಾಗಿಯೇ ಬೆಳೆದುಬಂದ ಗುಣವಿಶೇಷವಿದು. ಸರಳತೆ, ನೇರ ನಡೆ-ನುಡಿ, ಪರೋಪಕಾರ ಅಜ್ಜನ ವ್ಯಕ್ತಿತ್ವದ ಅವಿಭಾಜ್ಯ ಅಂಶಗಳು. ಅಜ್ಜನಿಗೆ 'ಕೂಡಿಡುವ ಸುಖ'ಕ್ಕಿಂತ ಹಂಚುವ ಪ್ರವೃತ್ತಿಯೇ 'ಪರಮಾನಂದ' ಕೊಡುತ್ತಿತ್ತು. ಅವರ ಮನೆ-ಮನದ ಬಾಗಿಲು ಯಾರಿಗೂ ಮುಚ್ಚಿದ್ದಿಲ್ಲ. ಒಂದು ಸಂಗತಿಯನ್ನು ಅತೀವವಾಗಿ ಹಚ್ಚಿಕೊಳ್ಳುತ್ತಲೇ ಆ ಕುರಿತು ನಿರ್ಲಿಪ್ತತೆಯನ್ನು ರೂಢಿಸಿಕೊಂಡಾಗ ಮಾತ್ರ ಸೋಲು ಕುಗ್ಗಿಸುವುದಿಲ್ಲ; ಗೆಲುವು ಹಿಗ್ಗಿಸುವುದಿಲ್ಲ ಎಂಬ ಮನೋಭಾವ ಹೊಂದಿದ್ದ ಅಜ್ಜ ಎಂದೂ ಹತಾಶರಾಗಿ ಕೈಚೆಲ್ಲಿದ್ದಿಲ್ಲ. ತಲೆಮೇಲೆ ಕೈಯಿಟ್ಟು ಕೂತದ್ದಿಲ್ಲ. ಕಳೆದ ದಿನಗಳ ಬಗ್ಗೆ ಯಾವುದೇ ಹಳಹಳಿಕೆ ಇಲ್ಲದಿದ್ದ ಅಜ್ಜನಿಗೆ ಬರಲಿರುವ ದಿನಗಳಲ್ಲಿ ಮಾಡಬೇಕಾದ ಕೆಲಸವಷ್ಟೆ ಮುಖ್ಯ. ಅದನ್ನು ಪೂರ್ಣಗೊಳಿಸಲು ಎಲ್ಲಿಲ್ಲದ ತವಕ. ಒಂದರ ಮುಕ್ತಾಯ ಇನ್ನೊಂದರ ಆರಂಭಕ್ಕೆ ನಾಂದಿ.



ಮೊಮ್ಮಗನಿಗೆ ಡಾಕ್ಟರೇಟ್ ಬಂದಾಗ ಅಜ್ಜನ ಹರ್ಷ; ಅಭಿನಂದನೆ.

ಸರಳತೆ, ನೇರನಡೆ - ನುಡಿ, ಪರೋಪಕಾರ ಅಜ್ಜನ ವ್ಯಕ್ತಿತ್ವದ ಅವಿಭಾಜ್ಯ ಅಂಶಗಳು. ಅಜ್ಜನಿಗೆ 'ಕೂಡಿಡುವ ಸುಖ'ಕ್ಕಿಂತ ಹಂಚುವ ಪ್ರವೃತ್ತಿಯೇ 'ಪರಮಾನಂದ' ಕೊಡುತ್ತಿತ್ತು. ಅವರ ಮನೆ-ಮನದ ಬಾಗಿಲು ಯಾರಿಗೂ ಮುಚ್ಚಿದ್ದಿಲ್ಲ.

ಇನ್ನೊಬ್ಬರ ಅಭಿಪ್ರಾಯ ಸ್ವಾತಂತ್ರ್ಯಕ್ಕೆ ಅಜ್ಜ ಹೆಚ್ಚಿನ ಬೆಲೆ ಕೊಡುತ್ತಿದ್ದರು. ಅಜ್ಜ ಚರ್ಚೆಗಿಳಿದದ್ದನ್ನೇ ನಾನು ನೋಡಿಲ್ಲ. ಮನೆಯಲ್ಲಿ ಅಥವಾ ಯಾವುದೇ ಮೀಟಿಂಗ್‌ಗಳಲ್ಲಿ ಮಾತು ಚರ್ಚೆಯ ರೂಪಕ್ಕೆ ತಿರುಗುತ್ತಿದ್ದಂತೆ ಅಜ್ಜ ಸುಮ್ಮನಾಗುತ್ತಿದ್ದರು. ಕೆಲವೊಮ್ಮೆ ತಮಾಷೆಗೆಂದು ಅಜ್ಜನೊಂದಿಗೆ ಚರ್ಚೆಗಿಳಿಯುತ್ತಿದ್ದೆ. ಅವರ ಮಾತನ್ನು ಒಪ್ಪದೇ ಇದ್ದರೆ ಕೊನೆಯಲ್ಲಿ ಅವರು, 'ಯೂ ಆರ್ ರೈಟ್, ಬಟ್ ಐ ಯಾಮ್ ನಾಟ್ ರಾಂಗ್' (ನಿನ್ನ ಧೋರಣೆ ಸರಿ, ಆದರೆ ನನ್ನದು ತಪ್ಪಲ್ಲ) ಎಂದು ನಗುತ್ತ ನನ್ನನ್ನು ಸೋಲಿಸಿಬಿಡುತ್ತಿದ್ದರು! ಅಜ್ಜ ಪೇಟೆಂಟ್ ಪಡೆದಂತಿದ್ದ ವಾಕ್ಯಗಳಲ್ಲಿ ಇದೂ ಒಂದು. ಬೇರೆ ಬೇರೆ ಸಂದರ್ಭಗಳಲ್ಲಿ ಅಜ್ಜ ಇದನ್ನು ಬಳಸಿ 'ಪರಿಸ್ಥಿತಿ ಬಿಗಡಾಯಿಸುವುದನ್ನು' ತಪ್ಪಿಸುತ್ತಿದ್ದರು. ಕೆಲವೊಮ್ಮೆ 'ಪ್ರಾಯ ಆದ ಹಾಗೆ ಮಕ್ಕಳು ಹೇಳಿದಂತೆ ಕೇಳಬೇಕು; ಮೊಮ್ಮಕ್ಕಳು ಹೇಳಿದಂತೆ ಅಂತೂ ಕೇಳಲೇಬೇಕು' ಎನ್ನುತ್ತಿದ್ದರು. 'ನನಗಿಂತ ನನ್ನ ಮಕ್ಕಳು ಹುಷಾರು; ಮಕ್ಕಳಿಗಿಂತ ಮೊಮ್ಮಕ್ಕಳು ಇನ್ನೂ ಹುಷಾರು' ಎಂದು ಅಜ್ಜ ಆಗಾಗ ಹೇಳುತ್ತಿದ್ದರು.

**ನಿರಂತರ ಪ್ರಯೋಗ**

ಅಜ್ಜನ ಉತ್ಸಾಹ, ಪ್ರಯೋಗಶೀಲತೆ ಬಗ್ಗೆ ಹಿಂದೆಯೇ ಪ್ರಸ್ತಾಪಿಸಿದ್ದೇನೆ. ಈ ನಿಟ್ಟಿನಲ್ಲಿ ನಾನು ಕಂಡ ಕೆಲವು ಸಂಗತಿಗಳನ್ನು ಹೇಳಲೇಬೇಕು.

ಜೇನುಪೆಟ್ಟಿಗೆಗಳು ವರ್ಷದಿಂದ ವರ್ಷಕ್ಕೆ ದುಬಾರಿಯಾಗುತ್ತಿದ್ದ ಕಾಲದಲ್ಲಿ ಅಜ್ಜ ಮಣ್ಣಿನ ಜೇನುಗೂಡು ಮಾಡಲು 1993-95ರ ಅವಧಿಯಲ್ಲಿ ಬಹಳಷ್ಟು ಪ್ರಯತ್ನಿಸಿದರು. ಅಜ್ಜ ದಿನವೂ ಆ ಬಗ್ಗೆ ನನ್ನಲ್ಲಿ ಹೇಳುತ್ತಿದ್ದರೂ ನಾನದಕ್ಕೆ ಹೆಚ್ಚು ಗಮನಹರಿಸಲಿಲ್ಲ. (ಅಜ್ಜನ ಯೋಜನೆಯ ಕುರಿತು ನಾನು ಒಂದು ಹೆಜ್ಜೆ ಮುಂದಿಟ್ಟರೆ ಅಜ್ಜ ಹತ್ತು ಹೆಜ್ಜೆ ಮುಂದಿಡುತ್ತಿದ್ದರು. ಇದು ಎಷ್ಟು ತ್ರಾಸದಾಯಕ ಎಂಬುದು ಮೀನ್ಮನೆ ಸಂಘ ನನಗೆ ಮನವರಿಕೆ ಮಾಡಿಕೊಟ್ಟಿತ್ತು. ಹಾಗಾಗಿ ಅಜ್ಜ ಏನೇ ಹೊಸ ಐಡಿಯಾ ಹೇಳಿದರೂ ಅದರಿಂದ ಹೇಗೆ ತಪ್ಪಿಸಿಕೊಳ್ಳುವುದು ಎಂದೇ ಯೋಚಿಸುತ್ತಿದ್ದೆ!)

ಅಜ್ಜ ಪಟ್ಟುಬಿಡದೆ ಪ್ರಯೋಗಕ್ಕಿಳಿದರು. ಮಣ್ಣಿನ ಗೂಡುಗಳು ಜೇನುಕುಟುಂಬಕ್ಕೆ ತುಂಬ ಹಿತವೆನಿಸಬಹುದು ಎಂಬ ಯೋಚನೆ ಅಜ್ಜನದ್ದು. ಇದನ್ನು ಸ್ಥಳೀಯವಾಗಿ ತಯಾರಿಸಬಹುದು; ಇದರಿಂದ ಕೆಲವರಿಗೆ ಉದ್ಯೋಗವಾಗುತ್ತದೆ; ಜೊತೆಗೆ ಇಂತಹ ಗೂಡುಗಳ ಬೆಲೆ ಕೂಡ ಸಾಕಷ್ಟು ಕಡಿಮೆಯಾಗಬಹುದು ಎಂದು ಅಜ್ಜ ಹೇಳುತ್ತಿದ್ದರು. ಜೇನುಗೂಡು ಪೂರ್ತಿ ಮಣ್ಣಿನದ್ದು; ಆದರೆ ಚೌಕಟ್ಟು(ಫ್ರೇಮ್)ಗಳು ಮಾತ್ರ ಮರದ್ದು ಎಂದು ಅವರು ವಿವರಿಸುತ್ತಿದ್ದರು.


ಜೇನುಗೂಡಿನಲ್ಲಿ ನಿರಂತರ ಪ್ರಯೋಗ.

ಒಂದು ದಿನ ಪರಿಚಯದವರ ಹಂಚಿನ ಕಾರ್ಖಾನೆಯಿಂದ ಹದಬರಿಸಿದ ಮಣ್ಣು ತಂದ ಅಜ್ಜ ಮನೆಯ ಹಿಂಭಾಗದಲ್ಲಿ ಜೇನುಗೂಡು ನಿರ್ಮಾಣ ಪ್ರಯೋಗ ಆರಂಭಿಸಿದರು. ಅಂತೂ ಒಂದು ಆಕೃತಿ ರೂಪುತಳೆಯಿತು. ಅದನ್ನು ಬಿಸಿಲಿಗೆ ಒಣಗಿಸಿ ಹಂಚಿನ ಫ್ಯಾಕ್ಟರಿಗೆ ಒಯ್ದು ಹಂಚು ಸುಡುವಂತೆ ಸುಟ್ಟರೆ ಜೇನುಗೂಡು ಸಿದ್ಧ. ಇದು ಅಜ್ಜನ ಥಿಯರಿ. ಆದರೆ ಬಿಸಿಲಿಗಿಟ್ಟ ಆಕೃತಿ ಮರುದಿನ ಬಿರಿಬಿಟ್ಟಿತು. ಅಜ್ಜ ಮತ್ತೆ ಮಣ್ಣುಮೆತ್ತಿದರು. ಹೀಗೆ ಬಿರಿಯುವುದೂ ಮೆತ್ತುವುದೂ ಮುಂದುವರಿದು ಕೊನೆಗೊಂದು ದಿನ ಅಜ್ಜ 'ಜೇನುಗೂಡು ರೆಡಿ' ಎಂದು ಘೋಷಿಸಿಯೇ ಬಿಟ್ಟರು. ಆದರೆ ಅದನ್ನು ಅಜ್ಜ ಹಂಚಿನ ಫ್ಯಾಕ್ಟರಿಗೆ ಕೊಂಡುಹೋದದ್ದಾಗಲೀ, ಅದರಲ್ಲಿ ಜೇನುಕುಟುಂಬ ಸಾಕಿದ್ದಾಗಲೀ ನನಗೆ ನೆನಪಿಲ್ಲ. ಅಜ್ಜ ಅದನ್ನು ಮಾಡಿರಲೂ ಸಾಕು. ಈ ಯೋಚನೆ ಮಾತ್ರ ಇಂದಿಗೂ ಪ್ರಸ್ತುತ.

ಅಜ್ಜ ತಮ್ಮ ಇಳಿವಯಸ್ಸಿನಲ್ಲೂ ತೋಟಗಾರಿಕಾ ಸಂಘ ಏರ್ಪಡಿಸುತ್ತಿದ್ದ ಫಲಪುಷ್ಪ ಪ್ರದರ್ಶನ ಸಂಘಟಿಸುವಲ್ಲಿ ಸಕ್ರಿಯರಾಗಿದ್ದರು. ಸಂಘದ ಪದಾಧಿಕಾರಿಗಳು ದೇಣಿಗೆ ಸಂಗ್ರಹಿಸಲು ಸುತ್ತಾಡುವಾಗ ಜೊತೆಗೆ ಅಜ್ಜನನ್ನೂ ಕರೆದೊಯ್ಯುತ್ತಿದ್ದರು. ಅಜ್ಜನಿಗೆ ಫಲಪುಷ್ಪ ಪ್ರದರ್ಶನದಲ್ಲಿ ಪಾಲ್ಗೊಳ್ಳುವುದಕ್ಕೂ ಉಮೇದಿತ್ತು. ಇದಕ್ಕಾಗಿ ಅವರು ಸಾಕಷ್ಟು ಮುಂಚಿತವಾಗಿಯೇ ತಯಾರಿ ನಡೆಸುತ್ತಿದ್ದರು. 8-10 ಕುಂಡಗಳಲ್ಲಿ ಕ್ರೋಟನ್ ಅಥವಾ ಕೋಲಿಯಸ್ ಬೆಳೆಸಿ ಅವುಗಳನ್ನು ಸಾಧ್ಯವಾದಷ್ಟೂ ಓರಣಗೊಳಿಸಿ ಪ್ರದರ್ಶನದ ಹಿಂದಿನ ದಿವಸ ತಾವೇ ಸ್ವತಃ ರಿಕ್ಷಾದಲ್ಲಿ ಕದ್ರಿಗುಡ್ಡೆಗೆ ಕೊಂಡೊಯ್ಯುತ್ತಿದ್ದರು. ಪ್ರದರ್ಶನದ ಸಂದರ್ಭದಲ್ಲಿ ದಿನಕ್ಕೆರಡು ಬಾರಿ ಅಲ್ಲಿಗೆ ಭೇಟಿ. ಆ ಸಂದರ್ಭದಲ್ಲಿ ನಾಲ್ಕಾರು ದಿನ ಅಜ್ಜ ಬಹಳ ಗೆಲುವಿನಿಂದಿರುತ್ತಿದ್ದರು.

## ನಿರಾಡಂಬರ

ಅಜ್ಜನಿಗೆ ಆಡಂಬರ ಎಂದೂ ಹಿಡಿಸದು. 'ಲಕ್ಸುರಿ' ಎಂಬ ಪದ ಅವರಮಟ್ಟಿಗೆ ಅರ್ಥಹೀನ. ಅಜ್ಜನ ಮನಸ್ಸು ಅತ್ಯಂತ 'ಆಧುನಿಕ'ವಾಗಿದ್ದರೂ ಅವರು ಮಾತ್ರ ಆಧುನಿಕ ಜಗತ್ತಿನ ಆಕರ್ಷಣೆಗಳಿಂದ ದೂರವಿದ್ದರು. ಅನೇಕ ಬಾರಿ ವಿದೇಶಗಳಿಗೆ ಹೋಗಿದ್ದ ಅಜ್ಜ, ಅಲ್ಲಿನ ಪ್ರಕೃತಿ, ಹೂದೋಟಗಳ ಕುರಿತಷ್ಟೇ ಮಾತನಾಡುತ್ತಿದ್ದರು.

ಅಮೇರಿಕಾದ ಬಗ್ಗೆ ಹೇಳುವಾಗ ಅಜ್ಜನಿಗೆ ನೆನಪಾಗುತ್ತಿದ್ದುದು ಆ್ಯಮಿಶ್ ಜನಾಂಗದ ಹಳ್ಳಿ. ಅಮೇರಿಕಾದಂಥ ದೇಶದಲ್ಲಿ ಆಧುನಿಕತೆಗೆ ತೆರೆದುಕೊಳ್ಳದೆ ಇನ್ನೂ ಸಾಂಪ್ರದಾಯಿಕ ಶೈಲಿಯಲ್ಲೇ ಜೀವನ ಸಾಗಿಸುತ್ತಿರುವ ಆ್ಯಮಿಶ್ ಜನರ ಬದುಕು ಅಜ್ಜನಿಗೆ ಕುತೂಹಲದ ಸಂಗತಿಯಾಗಿತ್ತು. ಆ್ಯಮಿಶ್ ಹಳ್ಳಿಯ ಬಗ್ಗೆ ಅವರು ಆಗಾಗ ಪ್ರಸ್ತಾಪಿಸುತ್ತಿದ್ದುದರಿಂದ ಆ ಹಳ್ಳಿ ಹೇಗಿದ್ದೀತು ಎಂಬ ಬಗ್ಗೆ ನನ್ನ ಮನಸ್ಸಿನಲ್ಲಿ ಸ್ಪಷ್ಟಚಿತ್ರಣ ಮೂಡಿತ್ತು. ಆ್ಯಮಿಶ್ ಜನಾಂಗದ ಮೇಲಿನ ಅಜ್ಜನ ಕುತೂಹಲ ಮತ್ತು ಒಲವು ಅವರ ಮನೋಭೂಮಿಕೆಯನ್ನು ಸಾಂಕೇತಿಕವಾಗಿ ನಮ್ಮ ಮುಂದೆ ತೆರೆದಿಡುತ್ತದೆ.

ದುಡ್ಡಿನ ಬಗ್ಗೆ ಅಜ್ಜನಿಗೆ ಯಾವ 'ಸಂವೇದನೆ'ಯೂ ಇರಲಿಲ್ಲವಾದ್ದರಿಂದ ಅವರು 'ದುಡ್ಡಿದ್ದವರಿಗೇ ಮಣೆಹಾಕುವ' ಜಾಯಮಾನದವರೂ ಆಗಿರಲಿಲ್ಲ. ದೊಡ್ಡ ಮನೆ ಕಟ್ಟಿಸಿದ ಸುದ್ದಿಗಿಂತ ಸಣ್ಣ ಮನೆಯ ಮುಂದಿರುವ ಸುಂದರ ಹೂದೋಟದ ಬಗ್ಗೆ ಕೇಳಲು ಅಜ್ಜನಿಗೆ ಕಾತರವಿತ್ತು. ತಮ್ಮ ಆಪ್ತರ ಮನೆಗಳಲ್ಲಿರುವ ಹೂದೋಟಗಳ ಪೈಕಿ ಎಲ್ಲಿ ಯಾವುದು ವಿಶೇಷ; ಯಾರ ಮನೆಯಲ್ಲಿ ಯಾವ ಬಗೆಯ ಅಪರೂಪದ ಮರಗಳಿವೆ ಎಂಬುದು ಅಜ್ಜನಿಗೆ ಗೊತ್ತಿತ್ತು. ಈ ಕುರಿತು ಅವರು ಆಗಾಗ ವಿಚಾರಿಸುತ್ತ 'ಅಪ್‌ಡೇಟ್' ಮಾಡಿಕೊಳ್ಳುತ್ತಿದ್ದರು. ಹೀಗಾಗಿ ನಮ್ಮ ಮನೆ(ಕಟ್ಟದ ಮಜಲು)ಯಲ್ಲಿ ಹೊಸ ಜಾತಿಯ ಗಿಡ ನೆಟ್ಟರೆ ಅದು ಅಜ್ಜನ ಮನಸ್ಸಿನಲ್ಲೂ ಬೇರುಬಿಟ್ಟು ಮರವಾಗಿ ಬೆಳೆದು ಹೂಬಿಡುತ್ತಿತ್ತು! 'ಶ್ರೀರಂಗ' ರೂಪುಗೊಂಡಾಗ ಅಜ್ಜ ತುಂಬ ಸಂತಸಪಟ್ಟಿದ್ದರು.



ಅಜ್ಜ ಮಲೇಷ್ಯಾದ ಉದ್ಯಾನದಲ್ಲಿ : 1985

ಜೇನು-ಮೀನು-ಹೂಗಿಡಗಳ ಅಜ್ಜನ ಭೌತಿಕ ಶರೀರದ ಅಸ್ತಂಗತ, ಅವರು ನಡೆದುಬಂದ ಹಾದಿಗೆ ಪೂರ್ಣ ವಿರಾಮವಾಗಬಾರದು. ಆ ಹಾದಿಯಲ್ಲಿ ನಾವು ನಡೆಯುವಷ್ಟು ದಿನವೂ ಅಜ್ಜ ನಮ್ಮೊಂದಿಗೇ ಇರುತ್ತಾರೆ; ನಮ್ಮನ್ನು ಹುರಿದುಂಬಿಸುತ್ತಲೇ ಇರುತ್ತಾರೆ.





ಕಿರಣ ಕಾರಂತ




# ಪ್ರಭಾವ

ಅಜ್ಜನ ಮೇಲೆ ಪ್ರಭಾವ ಬೀರಿದವರಲ್ಲಿ ಮೊಳಹಳ್ಳಿ ಶಿವರಾವ್, ಜಿ.ಎಂ. ಮಂಜುನಾಥಯ್ಯ (ಗುಂಡುಕುಟ್ಟಿ) ಹಾಗೂ ಶಿವರಾಮ ಕಾರಂತರು ಪ್ರಮುಖರು.

ಮೊಳಹಳ್ಳಿ ಶಿವರಾಯರು ಅಜ್ಜನನ್ನು ಸಹಕಾರಿ ಕ್ಷೇತ್ರಕ್ಕೆ ಪರಿಚಯಿಸಿದರು. ಶಿವರಾಯರ ಮಾರ್ಗದರ್ಶನದಲ್ಲಿ ಚೊಕ್ಕಾಡಿಯಲ್ಲಿ ಜೇನುವ್ಯವಸಾಯ ಸಹಕಾರಿ ಸಂಘ ಸ್ಥಾಪನೆಯಾಯಿತು. ಮುಂದೆ ಅವರೇ ಸ್ಥಾಪಿಸಿದ ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘಕ್ಕೆ ಅಜ್ಜ ಕಾರ್ಯದರ್ಶಿಯಾಗಿ (1948) ಸೇರಿದರು. 1972ರ ತನಕ ಅದರಲ್ಲಿಯೇ ಕಾರ್ಯನಿರ್ವಹಿಸಿದರು.

ಗುಂಡುಕುಟ್ಟಿ, ಮಂಜುನಾಥಯ್ಯ (ಅಜ್ಜನ ಚಿಕ್ಕಪ್ಪ) ಜೇನುಸಾಕಣೆ ಹಾಗೂ ಫೊಟೋಗ್ರಫಿ, ಹೂದೋಟ, ಅಕ್ವೇರಿಯಂ ಮೊದಲಾದ ಹವ್ಯಾಸಗಳಿಗೆ ಉತ್ತೇಜನ ನೀಡುತ್ತಿದ್ದರು. ಮಂಜುನಾಥಯ್ಯನವರ ಸೂಚನೆಯಂತೆ ಅಜ್ಜ ಮಡಿಕೇರಿಯ ಓಂಕಾರೇಶ್ವರ ದೇವಸ್ಥಾನದ ಕೆರೆಯಲ್ಲಿ ಗೋಲ್ಡ್‌ಫಿಶ್ ಬಿಟ್ಟಿದ್ದರು. ಅವು ಸಾಕಷ್ಟು ವೃದ್ಧಿಯಾಗಿ ಒಂದೊಮ್ಮೆ ಮಡಿಕೇರಿಯ ಆಕರ್ಷಣೆಯಲ್ಲಿ ಆ ಕೆರೆಯಲ್ಲಿನ ಗೋಲ್ಡ್‌ಫಿಶ್ ಕೂಡ ಸೇರಿತ್ತು.

ಶಿವರಾಮ ಕಾರಂತರು ಅಜ್ಜನ ಹವ್ಯಾಸಗಳನ್ನು ಸದಾ ಬೆಂಬಲಿಸುತ್ತಿದ್ದರು. ಅವರಿಬ್ಬರ ಗೆಳೆತನವೂ ಬಹಳ ಗಟ್ಟಿಯಾಗಿತ್ತು. ಅಜ್ಜ ಜೇನುಸಾಕಣೆ ಬಗ್ಗೆ ಬರೆದ ಪುಸ್ತಕಕ್ಕೆ (1944) ಮುನ್ನುಡಿ ಬರೆದಿದ್ದ ಕಾರಂತರು ಅಕ್ವೇರಿಯಂ ಬಗ್ಗೆ ಪುಸ್ತಕ ಬರೆಯಲು (1953) ಪ್ರೋತ್ಸಾಹಿಸಿದ್ದಲ್ಲದೆ ಅದಕ್ಕಾಗಿ ತಾವೇ ರಚಿಸಿದ್ದ ರೇಖಾಚಿತ್ರಗಳನ್ನೂ ನೀಡಿದ್ದರು. 1995ರಲ್ಲಿ ಪ್ರಕಟಗೊಂಡ 'ಜೇನು ವ್ಯವಸಾಯ' ಪರಿಷ್ಕೃತ ಆವೃತ್ತಿಗೂ ಕಾರಂತರೇ ಮುನ್ನುಡಿ ಬರೆದಿದ್ದರು.

ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರಿಂದಲೋ ಅಥವಾ ಶಿವರಾಯರ ಪ್ರಭಾವದಿಂದಲೋ ಅಜ್ಜ ಮೊದಲಿನಿಂದಲೂ ಖಾದಿಯನ್ನೇ ಧರಿಸುತ್ತಿದ್ದರು. ಮಿಲಿಟರಿಯ ದಿನಗಳು ಅಜ್ಜನನ್ನು ಶಿಸ್ತಿನ ಸಿಪಾಯಿಯನ್ನಾಗಿ ಮಾಡಿದವು. ಕಾರಂತರ ಒಡನಾಟ ಅಜ್ಜನನ್ನು ನಿರಂತರ ಹೊಸತಿನೆಡೆಗೆ ತುಡಿಯುವಂತೆ ಮಾಡಿದವು.

◆



ಪೈಲೂರು ಲಕ್ಷ್ಮೀನಾರಾಯಣ ರಾವ್ ಪೈಲೂರು ಮಹಾಬಲೇಶ್ವರಯ್ಯ

# ಸಹೋದರ ವಾತ್ಸಲ್ಯ

ಮಂಗಳೂರು ಅಜ್ಜನಿಗೆ ಅಣ್ಣ ಪೈಲೂರು ಮಹಾಬಲೇಶ್ವರಯ್ಯ (ಮಿತ್ತಮಜಲು ಅಜ್ಜ) ಅವರ ಮೇಲೆ ವಿಶೇಷ ಪ್ರೀತಿ-ಗೌರವ. ಅಣ್ಣನಿಗೂ ತಮ್ಮನ ಮೇಲೆ ಅಕ್ಕರೆಯ ಅಭಿಮಾನ. 'ಲಕ್ಷ್ಮೀನಾರಾಯಣ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿದ್ದಾನೆ; ಅಂಕೋಲದಲ್ಲಿ ನಡೆದ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಾನೆ' ಎಂದು ಮಿತ್ತಮಜಲು ಅಜ್ಜ ಆಗಾಗ ನೆನಪಿಸುತ್ತಿರುತ್ತಾರೆ. 'ಆಗ ಲಕ್ಷ್ಮೀನಾರಾಯಣ ಬಿ.ಎ. ಮಾಡುತ್ತಿದ್ದ. ಅದೇ ವೇಳೆಗೆ ಡಾ. ನ.ಸು. ಹರ್ಡೀಕರ್ ನೇತೃತ್ವದಲ್ಲಿ ಭಾರತ ಸೇವಾದಲದ ಚಟುವಟಿಕೆಗಳು ಅಲ್ಲಲ್ಲಿ ನಡೆಯುತ್ತಿದ್ದವು. ಈ ಕುರಿತು ಆಸಕ್ತಿ ತಳೆದ ಲಕ್ಷ್ಮೀನಾರಾಯಣ ಸೇವಾದಲ ತರಬೇತಿಗಾಗಿ (ಏಪ್ರಿಲ್ - ಮೇ ಬೇಸಿಗೆ ರಜೆಯಲ್ಲಿ) ಧಾರವಾಡಕ್ಕೆ ಹೋಗಿದ್ದ. ಅಲ್ಲಿಂದ ಅಂಕೋಲಕ್ಕೆ ತೆರಳಿ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಂಡಿದ್ದ. ಒಮ್ಮೆ ಬಂಧನಕ್ಕೂ ಒಳಗಾಗಿದ್ದ' ಎಂದು ಅವರು ವಿವರಿಸುತ್ತಾರೆ.



ಮಂಗಳೂರು ಅಜ್ಜ - ಮಿತ್ತಮಜಲು ಅಜ್ಜ

ಮಂಗಳೂರು ಅಜ್ಜ ಮೊಳಹಳ್ಳಿ ಶಿವರಾಯರ ಅನುಯಾಯಿ ಹಾಗೂ ಶಿವರಾಮ ಕಾರಂತರ ಒಡನಾಡಿಯೂ ಆಗಿದ್ದರೆಂಬುದು ಮಿತ್ತಮಜಲು ಅಜ್ಜನಿಗೆ ಅಭಿಮಾನದ ಸಂಗತಿ. 'ಜೇನುಸಂಘ' ಆರಂಭವಾದದ್ದೂ ಮಿತ್ತಮಜಲು ಮನೆಯಲ್ಲೆ. 'ಆಗ ಅಸಿಸ್ಟೆಂಟ್ ರಿಜಿಸ್ಟ್ರಾರರು ಮನೆಗೆ ಬಂದು ಜೇನುಸಂಘದ ನೋಂದಣಿ ಮಾಡಿದ್ದರು' ಎಂದು



ಪೈಲೂರು (ಮಿತ್ತಮಜಲು) ಮನೆ.

ಅವರು ನೆನಪಿನ ಬುತ್ತಿ ಬಿಚ್ಚಿಡುತ್ತಾರೆ.

ಮಂಗಳೂರು ಅಜ್ಜನ ತಮ್ಮ ಪೈಲೂರು ಶಿವರಾಮಯ್ಯ. ಇವರಿಬ್ಬರೂ ಪರಮ ಸಾಹಸಿಗಳು; ಅನುಶೋಧಕರು. ಶಿವರಾಮಯ್ಯ ಜೇನುವ್ಯವಸಾಯಗಾರರ ಸಹಕಾರಿ ಸಂಘದ ಸ್ಥಾಪಕರಲ್ಲೊಬ್ಬರಾಗಿದ್ದು, ಪ್ರಾರಂಭದಿಂದಲೇ ಅದರ ಗೌರವ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿದ್ದರು. ಮಂಗಳೂರು ಅಜ್ಜನಿಗೆ ಆತ್ಮೀಯ ಸ್ನೇಹಿತನಂತಿದ್ದ ಶಿವರಾಮಯ್ಯ ತನ್ನ 29ನೇ ವಯಸ್ಸಿನಲ್ಲಿ (21.1.1944) ಅಕಾಲ ನಿಧನರಾದರು. ಅದೇ ವರ್ಷ ಮಂಗಳೂರು ಅಜ್ಜನ 'ಜೇನಿನ ವ್ಯವಸಾಯ' ಕೃತಿಯ ಎರಡನೇ ಆವೃತ್ತಿ ಪ್ರಕಟಗೊಂಡಾಗ ಅದನ್ನು ಶಿವರಾಮಯ್ಯ ಅವರಿಗೆ ಅರ್ಪಿಸಲಾಯಿತು.

ಡಿಸೆಂಬರ್ 8, 2002ರಂದು ನಿಧನರಾದ ಮಂಗಳೂರು ಅಜ್ಜನ ಪಾರ್ಥಿವ ಶರೀರವನ್ನು ಮಂಗಳೂರಿನಿಂದ ಮಿತ್ತಮಜಲಿಗೆ ಕರೆದೊಯ್ದು ಅದೇ ರಾತ್ರಿ ಮನೆಯ ತೋಟದಲ್ಲಿ ಅಂತ್ಯಸಂಸ್ಕಾರ ನೆರವೇರಿಸಲಾಯಿತು. ಸದಾ ಪ್ರಕೃತಿಯನ್ನು ಧ್ಯಾನಿಸುತ್ತಿದ್ದ ಅಜ್ಜ ಪ್ರಕೃತಿಯೊಂದಿಗೆ ಸೇರಿಹೋದರು.

*(ಈ ಪುಸ್ತಕ ಅಚ್ಚಿಗೆ ಹೋಗುವ ಸಂದರ್ಭದಲ್ಲಿ ಏಪ್ರಿಲ್ 17, 2004ರಂದು ಮಿತ್ತಮಜಲು ಅಜ್ಜ ನಮ್ಮನ್ನಗಲಿದ್ದಾರೆ.)*





ಅಮೇರಿಕಾ ಪಯಣ(1982)ಕ್ಕೆ ಮುನ್ನ ಮಿತ್ತಮಜಲು ಅಜ್ಜ; ಮಂಗಳೂರು ಅಜ್ಜನೊಂದಿಗೆ.



ಪೈಲೂರು ಮುಮುಲೇಶ್ವರಯ್ಯ - ರಾಮಚಂದ್ರ ಪೈಲೂರು (ಮಂಗಳೂರು ಅಜ್ಜನ ಮಗ)




ಆರ್ನಮೆಂಟಲ್ ಫಿಶ್ ಫಾರ್ ಗಾರ್ಡನ್ ಪಾಂಡ್ಸ್ ಅಂಡ್ ಹೋಂ ಅಕ್ವೇರಿಯಮ್ಸ್ : 1956



ಆರ್ನಮೆಂಟಲ್ ಫಿಶ್ ಫಾರ್ ಅಕ್ವೇರಿಯಮ್ಸ್ : 1990

# ಅಜ್ಜ ಮತ್ತು ಬರವಣಿಗೆ

ಅಜ್ಜ ಬರವಣಿಗೆ ಆರಂಭಿಸಿದ್ದು ಯಾವಾಗ ಎಂಬ ಬಗ್ಗೆ ಸ್ಪಷ್ಟ ಮಾಹಿತಿ ಲಭ್ಯವಿಲ್ಲ. ಈಗ ಪತ್ರಿಕೋದ್ಯಮದಲ್ಲಿ ಯಾವುದನ್ನು 'ಪರ್ಪಸಿವ್ ರೈಟಿಂಗ್' (ಸ್ಪಷ್ಟ ಉದ್ದೇಶವಿರುವ ಬರವಣಿಗೆ) ಅನ್ನುತ್ತೇವೆಯೋ, ಅದನ್ನು ಅಜ್ಜ ಆ ಕಾಲದಲ್ಲೇ ರೂಢಿಸಿಕೊಂಡಿದ್ದರು. ಜೇನುವ್ಯವಸಾಯದ ಕುರಿತು ಜನರಿಗೆ ಮಾಹಿತಿ ನೀಡುವುದಕ್ಕಾಗಿ ಅಜ್ಜ 'ಜೇನು ನೊಣ ಸಾಕುವಿಕೆ' ಶೀರ್ಷಿಕೆಯ ತಮ್ಮ ಮೊದಲ ಪುಸ್ತಕವನ್ನು 1935ರಲ್ಲಿ ಪ್ರಕಟಿಸಿದರು. ಇದಕ್ಕೆ ಆಗಿನ ದಕ್ಷಿಣ ಕನ್ನಡ ಜಿಲ್ಲಾ ಬೋರ್ಡ್ ಅಧ್ಯಕ್ಷ ಎ.ಬಿ. ಶೆಟ್ಟಿ ಮುನ್ನುಡಿ ಬರೆದಿದ್ದರು. 45 ಪುಟಗಳ ಈ ಪುಸ್ತಕ ಅನೇಕ ಛಾಯಾಚಿತ್ರಗಳನ್ನೂ ರೇಖಾಚಿತ್ರಗಳನ್ನೂ ಒಳಗೊಂಡಿದೆ. ಪುಸ್ತಕದ ಆರಂಭದಲ್ಲಿ ಅಜ್ಜ ಹೀಗೆ ಬರೆದಿದ್ದಾರೆ: 'ಬಿಸಿಲೆನ್ನದೆ ಮಳೆಯೆನ್ನದೆ, ಸೇವೆಯೊಂದೇ ತಮ್ಮ ಧ್ಯೇಯವಾಗಿಟ್ಟುಕೊಂಡು ದುಡಿಯುವ ಜೇನುನೊಣಗಳ ಜೀವನ ಚರಿತ್ರೆಯನ್ನು ತಿಳಿದು ಅವುಗಳಲ್ಲಿ ಜನರಿಗೆ ಪ್ರೀತಿಯೂ, ಅವುಗಳನ್ನು ಗೂಡುಗಳಲ್ಲಿ ಸಾಕಿ ಪರಿಶುದ್ಧವಾದ ಜೇನನ್ನು ಜನರು ಪಡೆಯಬೇಕೆಂಬ ಅಭಿಲಾಷೆಯೂ ಜನರಲ್ಲಿ ಉಂಟಾಗಬೇಕೆಂಬ ಉದ್ದೇಶಗಳೇ ಈ ಚಿಕ್ಕ ಪುಸ್ತಕವನ್ನು ಬರೆಯಲು ನನ್ನನ್ನು ಪ್ರೇರೇಪಿಸಿದುದಾಗಿದೆ.'




ಜೇನು ನೊಣ ಸಾಕುವಿಕೆ : 1935

ಮುಂದೆ 1944ರಲ್ಲಿ ಪುತ್ತೂರು ತಾಲೂಕು ಸಹಕಾರಿ ಜೇನುವ್ಯವಸಾಯ, ಜೇನುಸಂಗ್ರಹ ಮತ್ತು ಮಾರಾಟ ಸಂಘದಿಂದ 'ಜೇನಿನ ವ್ಯವಸಾಯ' ಪ್ರಕಟಗೊಂಡಿತು. ಅದಕ್ಕೆ ಶಿವರಾಮ ಕಾರಂತರು ಮುನ್ನುಡಿ ಬರೆದಿದ್ದರು. ಆ ಪುಸ್ತಕ 1951 ಮತ್ತು 1959ರಲ್ಲಿ ಮರುಮುದ್ರಣಗೊಂಡಿತು. 'ಜೇನಿನ ವ್ಯವಸಾಯ' ಪುಸ್ತಕಕ್ಕೆ ಮದರಾಸಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಬಹುಮಾನ ಬಂದಿತ್ತಲ್ಲದೆ ಅದರ ಕೆಲಭಾಗ ಶಾಲಾಪಠ್ಯದಲ್ಲೂ ಅಳವಡಿಸಲ್ಪಟ್ಟಿತ್ತು

ಎಂಬುದು ಗಮನಾರ್ಹ. ಜೇನುಸಂಘದವರ ಕೋರಿಕೆಯ ಮೇರೆಗೆ 1995ರಲ್ಲಿ ಅಜ್ಜ 'ಜೇನು ವ್ಯವಸಾಯ' ಕೃತಿಯನ್ನು ಹೊಸದಾಗಿ ಬರೆದರು. ಇದಕ್ಕೂ ಶಿವರಾಮ ಕಾರಂತರೇ ಮುನ್ನುಡಿ ಬರೆದಿದ್ದರು.

ಜೇನುಸಾಕಣೆ ಕುರಿತ ಪತ್ರಿಕೆಯೊಂದಕ್ಕೂ ಅಜ್ಜ ಸಂಪಾದಕರಾಗಿದ್ದರು. ಜೇನುಸಂಘ 1957ರ ಏಪ್ರಿಲ್‌ನಲ್ಲಿ ಆರಂಭಿಸಿದ್ದ 'ಮಧುವನ' ಮಾಸಪತ್ರಿಕೆಗೆ ಅಜ್ಜ ಪ್ರಧಾನ ಸಂಪಾದಕ. ಕನ್ನಡ ಕೃಷಿ ಪತ್ರಿಕೋದ್ಯಮದ ಆರಂಭಿಕ ಪ್ರಯತ್ನಗಳಲ್ಲಿ 'ಮಧುವನ' ಕೂಡ ಒಂದು. ಪತ್ರಿಕೆಯ ವಾರ್ಷಿಕ ಚಂದಾ ಎರಡು ರೂಪಾಯಿ. 2-3 ವರ್ಷಗಳ ಬಳಿಕ 'ಮಧುವನ'ದ ಪ್ರಕಟಣೆಯ ಜವಾಬ್ದಾರಿಯನ್ನು ಕುಮಟದ ಉ.ಕ. ಜಿಲ್ಲಾ ಗ್ರಾಮಾಭಿವೃದ್ಧಿ ಸಂಘ ವಹಿಸಿಕೊಂಡಿತು. (ಲಿಂಗೇಶ ಶರ್ಮಾ ಅವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ ಈ ಪತ್ರಿಕೆ ಕೆಲ ಸಮಯ ಮುಂದುವರಿದು ನಂತರ ಸ್ಥಗಿತಗೊಂಡಿತು.)

ದ.ಕ. ಜೇನುಸಂಘ 1981ರಲ್ಲಿ 'ಮಧುಪ್ರಪಂಚ' ತ್ರೈಮಾಸಿಕ ಆರಂಭಿಸಿದಾಗ ಅಜ್ಜ ಮತ್ತೆ ಜೇನುವ್ಯವಸಾಯಕ್ಕೆ ಸಂಬಂಧಿಸಿ ಲೇಖನಗಳನ್ನು ಬರೆಯತೊಡಗಿದರು. ಜೇನುಸಂಘ ವಿವಿಧ ಸಂದರ್ಭಗಳಲ್ಲಿ ಹೊರತಂದ ಸ್ಮರಣಸಂಚಿಕೆಗಳಲ್ಲೂ ಅಜ್ಜನ ಲೇಖನಗಳಿವೆ. ಏಪ್ರಿಲ್ 2002ರಲ್ಲಿ ಬಿಡುಗಡೆಯಾದ 'ಮಧುಪ್ರಪಂಚ ವಿಶೇಷಾಂಕ'ದಲ್ಲಿ ಪ್ರಕಟವಾದ 'ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜೇನುವ್ಯವಸಾಯದ ಪ್ರಾರಂಭ ಮತ್ತು ಪ್ರಗತಿ' ಲೇಖನ ಅಜ್ಜನ ಕೊನೆಯ ಬರಹ. ಅದರ ಕೊನೆಯಲ್ಲಿ ಅಜ್ಜ 'ಇದೀಗ 64 ವರ್ಷಗಳ ಹಿಂದೆ ಚಿಕ್ಕ ಸ್ವರೂಪದಲ್ಲಿ ಸ್ಥಾಪಿಸಲ್ಪಟ್ಟ ಜೇನು ಸಹಕಾರಿ ಸಂಸ್ಥೆಯು ಒಂದು ಬೃಹತ್ ಸ್ವರೂಪದಲ್ಲಿ ಬೆಳೆದು ನಿಂತಿರುವುದಕ್ಕೆ ಅತ್ಯಾನಂದವಾಗುತ್ತಿದೆ' ಎಂಬ ಮಾತು ಸೇರಿಸಿದ್ದಾರೆ. ಜೇನುಸಂಘಕ್ಕೆ ಇದಕ್ಕಿಂತ ದೊಡ್ಡ ಸರ್ಟಿಫಿಕೆಟ್ ಬೇರೆ ಬೇಕಿಲ್ಲ.

ಜೇನುಸಾಕಣೆ ಪ್ರಚಾರಕ್ಕಾಗಿ ಲೇಖನಿ ಹಿಡಿದ ಅಜ್ಜ, ಅಕ್ವೇರಿಯಂ ಹವ್ಯಾಸ ಜನಪ್ರಿಯಗೊಳಿಸುವುದಕ್ಕೂ ಲೇಖನ ಬರೆದರು; ಪುಸ್ತಕ ಪ್ರಕಟಿಸಿದರು. 1938ರಲ್ಲಿ ಅಜ್ಜ ಮುಂಬಯಿಗೆ ಹೋಗಿದ್ದ ಸಂದರ್ಭದಲ್ಲಿ ತಾರಾಪುರ್‌ವಾಲಾದಲ್ಲಿ ಮತ್ಸ್ಯಾಗಾರ ನೋಡಿ ಅದರ ಮೋಡಿಗೆ ಮರುಳಾದರು. ಅವರು ತಡಮಾಡಲಿಲ್ಲ. ಕೆಲವು ಬಣ್ಣದ ಮೀನುಗಳು ಹಾಗೂ ಅವುಗಳನ್ನು ಸಾಕುವ ಬಗ್ಗೆ ಒಂದಷ್ಟು ಮಾಹಿತಿಯೊಂದಿಗೆ ಮಂಗಳೂರಿಗೆ ಹಿಂದಿರುಗಿದವರೇ ಈ ಹೊಸ ಹವ್ಯಾಸ ಶುರುಮಾಡಿದರು.

ಕೆಲವೇ ತಿಂಗಳಲ್ಲಿ ಅಜ್ಜ ಅಕ್ವೇರಿಯಂ ಹವ್ಯಾಸದ ಬಗ್ಗೆ ಬರೆದ ಲೇಖನವೊಂದು ಮುಂಬಯಿಯ 'ಇಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯ' ಮ್ಯಾಗಝಿನ್‌ನಲ್ಲಿ ಪ್ರಕಟವಾಯಿತು. ಜೊತೆಗೆ ಇನ್ನಷ್ಟು ಮಾಹಿತಿ ಕೋರಿ ಓದುಗರಿಂದ ಅಜ್ಜನಿಗೆ ಅನೇಕ ಪತ್ರಗಳು ಬಂದವು. ಅಜ್ಜನ ಆಸಕ್ತಿಯನ್ನು ಬಲ್ಲ ಶಿವರಾಮ ಕಾರಂತರು ಅಕ್ವೇರಿಯಂ ಬಗ್ಗೆ ಪುಸ್ತಕ ಬರೆಯುವಂತೆ ಅವರನ್ನು ಹುರಿದುಂಬಿಸಿದರು.



ಜೇನಿನ ವ್ಯವಸಾಯ : 1944



ಜೇನಿನ ವ್ಯವಸಾಯ : 1951



ಜೇನಿನ ವ್ಯವಸಾಯ : 1959

ಮಾತ್ರವಲ್ಲ, ಮೀನುಗಳ ಕುರಿತು ತಾವು ರಚಿಸಿದ್ದ ಕೆಲವು ರೇಖಾಚಿತ್ರಗಳನ್ನು ಅಜ್ಜನಿಗೆ ನೀಡಿದರು. 1953ರಲ್ಲಿ ಅಜ್ಜನ 'ಆರ್ನಮೆಂಟಲ್ ಫಿಶ್ ಫಾರ್ ಗಾರ್ಡನ್ ಪಾಂಡ್ಸ್ ಅಂಡ್ ಹೋಂ ಅಕ್ವೇರಿಯಮ್ಸ್' ಇಂಗ್ಲಿಷ್ ಪುಸ್ತಕ ಪ್ರಕಟವಾಯಿತು. ಪುಸ್ತಕದ ಪ್ರತಿಗಳು ಬಹುಬೇಗ ಮುಗಿದವು. ಅಜ್ಜನ ಚಿಕ್ಕಪ್ಪ ಜಿ.ಎಂ. ಮಂಜುನಾಥಯ್ಯನವರ ಸಲಹೆಯಂತೆ ಅಜ್ಜ 1956ರಲ್ಲಿ ಈ ಪುಸ್ತಕವನ್ನು ಮರುಮುದ್ರಿಸಿದರು. ದ್ವಿವರ್ಣ



ಜೇನು ವ್ಯವಸಾಯ : 1995



ಮಧುವನ ಮಾಸಪತ್ರಿಕೆ : 1958

ಮುಖಪುಟದ ಅದರ ಬೆಲೆ ಒಂದು ರೂಪಾಯಿ. ಅಜ್ಜ ಅಷ್ಟಕ್ಕೇ ಸಮಾಧಾನಗೊಳ್ಳಲಿಲ್ಲ. ಅದರ ಪರಿಷ್ಕೃತ ಆವೃತ್ತಿಯನ್ನು 1990ರಲ್ಲಿ ಪ್ರಕಟಿಸಿದರು. ಬಹುವರ್ಣ ಮುಖಪುಟದ 'ಆರ್ನಮೆಂಟಲ್ ಫಿಶ್ ಫಾರ್ ಅಕ್ವೇರಿಯಂ' ಪುಸ್ತಕಕ್ಕೆ ಬೆಲೆ ನಮೂದಿಸಿರಲಿಲ್ಲ. ಅದನ್ನು ಮನೆಗೆ ಬಂದ ಅತಿಥಿಗಳಿಗೆ, ಆಸಕ್ತರಿಗೆ ಅಜ್ಜ ಉಚಿತವಾಗಿ ನೀಡುತ್ತಿದ್ದರು. ಮಂಗಳೂರು ಮನೆಗೆ ಬಂದವರಲ್ಲಿ ಅಜ್ಜನಿಂದ ಈ ಪುಸ್ತಕವನ್ನು ಪಡೆಯದವರೇ ಇರಲಾರರೇನೋ.

ಅಜ್ಜನ ಸಹಿ

ಒಂದು ದಿನ 'ಅಕ್ವೇರಿಯಂ ಬಗ್ಗೆ ನೀವು ಕನ್ನಡದಲ್ಲಿ ಯಾಕೆ ಪುಸ್ತಕ ಬರೆಯಲಿಲ್ಲ?' ಎಂದು ಪ್ರಶ್ನಿಸಿದ್ದಕ್ಕೆ ಅಜ್ಜ, 'ನೀನೇ ಬರಿ' ಅಂದರು. (ಆಗ ನಾನು 'ತರಂಗ'ದಲ್ಲಿ ಮೀನ್ಮನೆ ಕುರಿತು ನುಡಿಚಿತ್ರ ಬರೆದಿದ್ದೆ.) ಪುಸ್ತಕ ಬರೆಯಲು ನಾನು ಅಂತಹ ಉಮೇದು ತೋರಲಿಲ್ಲ. ಒಂದು ದಿನ ಅಜ್ಜನೇ ಈ ಕೆಲಸ ಆರಂಭಿಸಿದರು. ಹನ್ನೊಂದು ಅಧ್ಯಾಯಗಳನ್ನು ಗುರುತು ಹಾಕಿಕೊಂಡು ಬರವಣಿಗೆ ಶುರುಮಾಡಿದರು. ಆದರೆ ಅಜ್ಜ ಅದನ್ನು ಐದನೇ ಅಧ್ಯಾಯಕ್ಕೇ ನಿಲ್ಲಿಸಿಬಿಟ್ಟಿದ್ದಾರೆ.

◆




# ಶಿವರಾಮ ಕಾರಂತರ ಮುನ್ನುಡಿ

ಜೇನುವ್ಯವಸಾಯದ ಕುರಿತು ಮಂಗಳೂರು ಅಜ್ಜ ಬರೆದ ಮೊದಲ ಪುಸ್ತಕ 'ಜೇನು ನೊಣ ಸಾಕುವಿಕೆ' 1935ರಲ್ಲಿ ಪ್ರಕಟವಾಯಿತು. ನಂತರದ ವರ್ಷಗಳಲ್ಲಿ ಇದರ ಪರಿಷ್ಕೃತ ಆವೃತ್ತಿಗಳು 1944, 1951, 1959 ಹಾಗೂ 1995ರಲ್ಲಿ ಪ್ರಕಟಗೊಂಡವು. 1944 (ಜೇನಿನ ವ್ಯವಸಾಯ)ಹಾಗೂ 1995ರ (ಜೇನು ವ್ಯವಸಾಯ) ಆವೃತ್ತಿಗಳಿಗೆ ಶಿವರಾಮ ಕಾರಂತರು ಮುನ್ನುಡಿ ಬರೆದಿದ್ದರು. ಆ ಎರಡು ಮುನ್ನುಡಿಗಳು ಇಲ್ಲಿವೆ:

ಶ್ರೀಮಾನ್ ಪೈಲೂರು ಲಕ್ಷ್ಮೀನಾರಾಯಣರಾಯರು ನನಗೆ ಬಹು ಹಿಂದಿನಿಂದ ಪರಿಚಿತರು. ಅವರಷ್ಟೇ ಪರಿಚಯ, ಅವರ ಕೆಲಸದ ವಿಷಯವಾಗಿಯೂ ನನಗಿದೆ. ಅವರ ಪ್ರಿಯವಾದೊಂದು ಉದ್ಯಮ ಜೇನುನೊಣ ಸಾಕುವುದು. ಇದನ್ನು ಅವರು ವಿದ್ಯಾರ್ಥಿದೆಸೆಯಿಂದಲೇ ತೊಡಗಿ ಬಂದಿದ್ದಾರೆ. ಕೆಲವು ಕಾಲ ಕೊಡಗು ಸರಕಾರಕ್ಕೂ ಅವರು ಜೇನುನೊಣ ಸಾಕುವ ವಿಷಯದಲ್ಲಿ ಪ್ರಚಾರಕರಾಗಿದ್ದರು. ಅವರಿಗೆ ಈ ವಿಷಯದಲ್ಲಿ ಶಾಸ್ತ್ರೀಯವಾದ ಪರಿಜ್ಞಾನವಿದೆ. ತಮ್ಮ ಅನುಭವವನ್ನು ಅವರು ಬರಹರೂಪವಾಗಿ ಹಾಕಿದುದು, ಅದು ಎರಡನೆಯ ಮುದ್ರಣವನ್ನು ಕಂಡುದು ಅವರ ಕೆಲಸದ ಮಹತ್ವಕ್ಕೂ, ಅವರ ಉದ್ಯಮಪ್ರಿಯತೆಗೂ ಜನಾದರಕ್ಕೂ ತಕ್ಕುದಾದ ಉದಾಹರಣೆಯಲ್ಲವೆ?

ಈ ಬಾರಿ ಅವರ ಗ್ರಂಥ ಇನ್ನಷ್ಟು ಸುಂದರವಾದ ಚಿತ್ರಗಳಿಂದ ಅಲಂಕೃತವಾಗಿದೆ. ಓದುಗರ ಮನಸ್ಸಿನಲ್ಲಿ, ಗ್ರಾಮ ಕೈಗಾರಿಕೆಗಳಲ್ಲಿ ಒಂದಾಗಬಹುದಾದ ಈ ಉದ್ಯಮದ ಪ್ರೀತಿ ಉಳಿದರೆ ಬರಹಗಾರನ ಶ್ರಮ ಸಾರ್ಥಕವಾದೀತಲ್ಲವೇ?

1944 — ಶಿವರಾಮ ಕಾರಂತ

• • •

ಜೇನುವ್ಯವಸಾಯವನ್ನು ಕುರಿತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತೊಡಗಿದವರು ಪೈಲೂರು ಲಕ್ಷ್ಮೀನಾರಾಯಣ ರಾಯರು ಮತ್ತು ಹಿರಿಯ ಪೈಲೂರು ನಾರಾಯಣರೇ. ಬರಿಯ ಅಷ್ಟೇ ಅಲ್ಲ. ನಾಲ್ಕನೆಯ ದಶಕದಲ್ಲಿ - ಉತ್ತಮ ಜಾನುವಾರು ಪೀಳಿಗೆ, ವಿಲಾಸೀ ಮತ್ಸ್ಯಾಗಾರದಂಥ ಉದ್ಯಮಗಳ ಪ್ರೇರಕರು ಅವರು. ಇಂದು ನಮ್ಮ ಜಿಲ್ಲೆಯಲ್ಲೂ ಕೊಡಗಿನಲ್ಲೂ ಈ ವ್ಯವಸಾಯಗಳು ಅತಿ ಯಶಸ್ಸನ್ನು ಪಡೆದಿರುವುದಾದರೆ ಅದರ ಮೂಲಪ್ರೇರಕರು ಈ ಇಬ್ಬರು ವ್ಯಕ್ತಿಗಳೇ ಎಂಬುದನ್ನು ನಾನೆಂದೂ ಮರೆಯಲಾರೆ.

ಪೈಲೂರು ನಾರಾಯಣರು ಆ ಅಕಾಲದಲ್ಲಿ ಅಮೇರಿಕದಿಂದ ಜಾನುವಾರು ಸಾಕಣೆ, ಕುರಿಸಾಕಣೆಗಳಂಥ ಉದ್ಯಮಗಳ ವಿಚಾರ ಸಾಹಿತ್ಯ ಸಂಗ್ರಹಿಸಿದ್ದನ್ನು ನೋಡಿ ನಾನು ಅವುಗಳನ್ನು ಕುರಿತು ಬಾಲಪ್ರಪಂಚದಲ್ಲಿ ಪ್ರಕಟಿಸಿದೆ.

ಈ ಮಿತ್ರರ ನೆನಪು ಜೇನಿಗಿಂತ ನನಗೆ ಸವಿಯಾಗಿ ಕಂಡರೆ ಆಶ್ಚರ್ಯಪಡಬೇಕಿಲ್ಲ. ನಮ್ಮ ಜನರಿಗೂ ಅದು ನೆನಪಿರಲೆಂದು ಹಾರೈಸುತ್ತೇನೆ.

ಸಾಲಿಗ್ರಾಮ — ಶಿವರಾಮ ಕಾರಂತ
31-5-1995



ಮಂಗಳೂರಿಗೆ ರಾಜಾಜಿ ಭೇಟಿ.

# ಫೋಟೋಗ್ರಫಿಯಲ್ಲಿ ಅಜ್ಜನ ಆಸಕ್ತಿ



ಮಂಗಳೂರು ಅಜ್ಜಿಯ ಮಡಿಲಲ್ಲಿ ಮಗಳು ಜಯಲಕ್ಷ್ಮೀ.

ಛಾಯಾಗ್ರಹಣದಲ್ಲಿ ಮಂಗಳೂರು ಅಜ್ಜನಿಗೆ ಅನೇಕ ದಶಕಗಳ ಅನುಭವ. ಆರಂಭದಲ್ಲಿ ಅವರ ಬಳಿ ರಾಲಿಫ್ಲೆಕ್ಸ್ (120 ಎಂಎಂ) ಕೆಮರಾ ಇತ್ತು. ಇದರಲ್ಲಿ ತೆಗೆದ ಛಾಯಾಚಿತ್ರಗಳು 'ಇಲಸ್ಟ್ರೇಟೆಡ್ ವೀಕ್ಲಿ'ಯಲ್ಲಿಯೂ ಪ್ರಕಟಗೊಂಡಿದ್ದವು. ಜೇನು ವ್ಯವಸಾಯ ಹಾಗೂ ಮೀನ್ಮನೆಗೆ ಸಂಬಂಧಿಸಿ ಅಜ್ಜ ಫೋಟೋ ತೆಗೆಯುತ್ತಿದ್ದರು.



ಬಜಪೆಗೆ ವಿಮಾನ ಹಾರಾಟ.



ಭೋರ್ಗರೆವ ಜೋಗ್ ಜಲಪಾತ.

ಪ್ರವಾಸದ ಸಂದರ್ಭದಲ್ಲಿ, ಮಂಗಳೂರಿನ ಪ್ರಮುಖ ಘಟನೆಗಳ ಸಂದರ್ಭದಲ್ಲಿ ಕೂಡ ಅವರು ಕ್ಲಿಕ್ಕಿಸುತ್ತಿದ್ದರು. ಅಜ್ಜ ಸೆರೆಹಿಡಿದ ಮುಂಬಯಿಯ ವಿಕ್ಟೋರಿಯ ಟರ್ಮಿನಲ್, ಜೋಗ್ ಜಲಪಾತ, ಮಂಗಳೂರಿಗೆ ವಿಮಾನ ಹಾರಾಟ, ರಾಜಾಜಿ ಭೇಟಿ ಮುಂತಾದ ಚಿತ್ರಗಳು ಗಮನ ಸೆಳೆಯುತ್ತವೆ. ತಮ್ಮ ಕುಟುಂಬದ ಸದಸ್ಯರು ಹಾಗೂ ಬಂಧು ಬಳಗದವರ ಫೋಟೋಗಳನ್ನೂ ಅವರು ಸಾಕಷ್ಟು ತೆಗೆದಿದ್ದರು. ರಾಲಿಫ್ಲೆಕ್ಸ್ ನಂತರ ಅಜ್ಜನಲ್ಲಿ ಯಶಿಕಾ ಎಲೆಕ್ಟ್ರೋ 35 ಕೆಮರಾ ಇತ್ತು.

◆



ಅಜ್ಜ ಉಪಯೋಗಿಸುತ್ತಿದ್ದ 16 ಎಂಎಂ ಪ್ರೊಜೆಕ್ಟರ್.

# ಅಜ್ಜ ಮತ್ತು ಪ್ರೊಜೆಕ್ಟರ್

ಅಜ್ಜನಿಗೆ ಪ್ರೊಜೆಕ್ಟರಿನ ನಂಟು ಬೆಳೆದದ್ದು 60ರ ದಶಕದಲ್ಲಿ. ಸತ್ಯಸಾಯಿ ಬಾಬಾ ಅವರ ಭಕ್ತರಾಗಿದ್ದ ಅಜ್ಜ ಪುಟ್ಟಪರ್ತಿಯಲ್ಲಿ ನಡೆಯುತ್ತಿದ್ದ ಪ್ರಮುಖ ಕಾರ್ಯಕ್ರಮಗಳ ಚಿತ್ರೀಕರಣ ಮಾಡಿಸುತ್ತಿದ್ದರು.

ಬಾಬಾ ಅವರ ಹುಟ್ಟುಹಬ್ಬ, ಸಮಾರಂಭ, ಗುರು ಪೂರ್ಣಿಮೆ - ಶಿವರಾತ್ರಿ ಆಚರಣೆ ಮುಂತಾದ ಕಾರ್ಯಕ್ರಮಗಳನ್ನು ಚಿತ್ರೀಕರಿಸಲು ಅಜ್ಜ ಮದರಾಸಿನ ಫೋಟೋ ಎಂಪೋರಿಯಂಗೆ ಕಂಟ್ರಾಕ್ಟ್ ಕೊಡುತ್ತಿದ್ದರು.



1966ರಿಂದ 76ರ ಅವಧಿಯಲ್ಲಿ 15 ನಿಮಿಷದಿಂದ ಒಂದು ಗಂಟೆ ಅವಧಿಯ ಸುಮಾರು 40 ಸಾಕ್ಷ್ಯಚಿತ್ರಗಳನ್ನು ಅಜ್ಜ ತೆಗೆಸಿದ್ದರು. ಬಾಬಾ ಅವರ ಮುಂಬಯಿ ಹಾಗೂ ಮಂಗಳೂರು ಭೇಟಿಯನ್ನೂ ಅಜ್ಜ ಚಿತ್ರೀಕರಿಸಿದ್ದರು. ಫೋಟೋ ಎಂಪೋರಿಯಂನ ರಾಘವನ್ ಕ್ಯಾಮರಾಮ್ಯಾನ್ ಆಗಿದ್ದರು. ಆಗ ಒಂದು ಅಡಿ ಫಿಲಂ ಚಿತ್ರೀಕರಿಸಲು 4ರಿಂದ 6 ರೂಪಾಯಿ ನೀಡಬೇಕಿತ್ತು. ಅರ್ಧ ಗಂಟೆಯ ಚಲನಚಿತ್ರಕ್ಕೆ ಸುಮಾರು ಎರಡು ಸಾವಿರ ರೂಪಾಯಿ ಖರ್ಚಾಗುತ್ತಿತ್ತು.

ಅಜ್ಜನ ಬಳಿ ಆರಂಭದಲ್ಲಿ ಸೂಪರ್ 8 ಎಂಎಂ ಸಾನ್‌ಕ್ಯೋ (ಜಪಾನ್) ಮೂವಿ ಕೆಮರಾ ಹಾಗೂ 'ಚಿಕಾಗೋ ರೆವರ್ ಕೆಮರಾ ಕಂಪೆನಿ'(ಅಮೇರಿಕಾ)ಯ ಸೂಪರ್ 8 ಎಂಎಂ ಪ್ರೊಜೆಕ್ಟರ್ ಇತ್ತು. ಆ ನಂತರ 'ರೇಡಿಯೋ ಕಾರ್ಪೊರೇಶನ್ ಅಮೇರಿಕಾ' ಕಂಪೆನಿಯ 16 ಎಂಎಂ ಪ್ರೊಜೆಕ್ಟರ್ ಕೊಂಡುಕೊಂಡರು.

ಮೊದಮೊದಲು ಚಲನಚಿತ್ರಗಳು ಮೂಕಿಚಿತ್ರಗಳಾದ್ದರಿಂದ ಅಜ್ಜ ಫಿಲಿಪ್ಸ್ ಸ್ಪೂಲ್ ಟೇಪ್‌ರೆಕಾರ್ಡಿನಲ್ಲಿ ಭಜನೆಯನ್ನು ಪ್ಲೇ ಮಾಡಿ ಆ ಹಿನ್ನೆಲೆಯಲ್ಲಿ ಚಲನಚಿತ್ರ ಪ್ರದರ್ಶಿಸುತ್ತಿದ್ದರು.

ಸಾಯಿ ಬಾಬಾ ಅವರನ್ನು ಕುರಿತ ಫಿಲಂಗಳ ಜೊತೆಗೆ ಅಜ್ಜನ ಬಳಿ ಜೋಗ್ ಜಲಪಾತ, ಜೇನುಸಾಕಣೆ ಮುಂತಾದ ವಿಷಯಗಳ ಬಗ್ಗೆಯೂ ಫಿಲಂಗಳಿದ್ದವು.


ಬೂಸರ್ 8 ಎಂಎಂ ಪ್ರೊಜೆಕ್ಟರ್.

ತಮ್ಮ ಕಾರಿನಲ್ಲಿ 16 ಎಂಎಂ ಪ್ರೊಜೆಕ್ಟರ್ ಹಾಗೂ ಫಿಲಂಗಳನ್ನು ತುಂಬಿಕೊಂಡು ಅಜ್ಜ ಕೇರಳದಿಂದ ಹಿಡಿದು ಉತ್ತರ ಕರ್ನಾಟಕದ ವರೆಗೆ ವಿವಿಧೆಡೆಗಳಲ್ಲಿ ಚಲನಚಿತ್ರ ಪ್ರದರ್ಶನ ನಡೆಸಿದ್ದರು. ಇದೇ ಉದ್ದೇಶಕ್ಕಾಗಿ ಅಜ್ಜ ಶ್ರೀಲಂಕಾ, ಮಲೇಷ್ಯಾಕ್ಕೂ ಭೇಟಿ ನೀಡಿದ್ದರು. ಸ್ಥಳೀಯವಾಗಿ ಬಹುತೇಕ ಸಂದರ್ಭಗಳಲ್ಲಿ ಅಜ್ಜನೊಂದಿಗೆ ಅವರ ಗೆಳೆಯ ಕದ್ರಿಯ ಎನ್.ಜಿ. ನಾಯಕ್ ಅವರೂ ಇರುತ್ತಿದ್ದರು. ಬಾಬಾ ಭಕ್ತರೂ ಆಗಿದ್ದ ನಾಯಕ್ ಅವರೇ ಪ್ರೊಜೆಕ್ಟರ್ ಚಲಾಯಿಸುತ್ತಿದ್ದರು. *(ಮಾಹಿತಿ : ಕೃಷ್ಣಕುಮಾರ್ ಪೈಲೂರು)*

ನಾನು ಮಂಗಳೂರಿಗೆ ಬಂದ (1991) ನಂತರದ ದಿನಗಳಲ್ಲಿ ಅಜ್ಜ ಆಗೊಮ್ಮೆ ಈಗೊಮ್ಮೆ ಪ್ರೊಜೆಕ್ಟರ್ ಹೊರತೆಗೆದು ಸಾಯಿಭಕ್ತರಿಗೆ, ಅಜ್ಜಿಗೆ ಫಿಲಂ ತೋರಿಸುತ್ತಿದ್ದರು. ಆದರೆ ಪ್ರೊಜೆಕ್ಟರ್ ಸದಾ ಕೈಕೊಡುತ್ತಿತ್ತು. ಅದರ ಬಿಡಿಭಾಗಗಳೂ ಸರಿಯಾಗಿ ಸಿಗುತ್ತಿರಲಿಲ್ಲವಾದ್ದರಿಂದ ಒಂದು ಭಾಗ ರಿಪೇರಿ ಯಾಗುವಷ್ಟರಲ್ಲಿ ಇನ್ನೊಂದೆಲ್ಲೋ ಕೆಟ್ಟುಬಿಡುತ್ತಿತ್ತು. ಕೆಲವರಿಗೆ ರಿಪೇರಿ ಮಾಡುವುದು ಹೇಗೆಂದೇ ತಿಳಿಯದೆ ಪ್ರೊಜೆಕ್ಟರ್‌ನ ಸ್ಥಿತಿ ಕ್ರಮೇಣ 'ಚೇತರಿಸಲಾಗದ ಹಂತ'ಕ್ಕೆ ತಲುಪಿತ್ತು. ಆದರೂ ಅಜ್ಜ ಅದರೊಂದಿಗೆ ಗುದ್ದಾಡುವುದು ಮುಂದುವರಿದೇ ಇತ್ತು.


ಫಿಲಿಪ್ಸ್ ಸ್ಪೂಲ್ ಸ್ಟೀರಿಯೋ ಟೇಪ್‌ರೆಕಾರ್ಡರ್.

ಪ್ರೊಜೆಕ್ಟರಿನ ಜೊತೆಗೆ ಫಿಲಂಗಳೂ ಸಮಸ್ಯೆ ಸೃಷ್ಟಿಸುತ್ತಿದ್ದವು. ಹಳೆಯದಾದ ಕೆಲವು ಫಿಲಂಗಳ ಅಂಚುಗಳು ಹರಿಯುತ್ತಿದ್ದುದರಿಂದ ಅವು ಪ್ರೊಜೆಕ್ಟರಿನಲ್ಲಿ ಸಲೀಸಾಗಿ ಮುಂದಕ್ಕೆ ಹೋಗದೆ ಫಿಲಂ ಕಟಕಟ ಎಂದು ಶಬ್ದ ಮಾಡುತ್ತಾ ನಿಂತುಬಿಡುತ್ತಿತ್ತು. ಇನ್ನು ಕೆಲವು ಫಿಲಂಗಳು ನಾಲ್ಕಾರು ಅಡಿ ಸಾಗುತ್ತಿದ್ದಂತೆ ತುಂಡಾಗಿ ಫಜೀತಿಯಾಗುತ್ತಿತ್ತು. ಅಜ್ಜ ಅವನ್ನು ಪ್ರೊಜೆಕ್ಟರಿನಿಂದ ಹೊರತೆಗೆದು ರಿವೈಂಡರಿಗೆ ಹಾಕಿ, ತುಂಡಾದ ಭಾಗಗಳನ್ನು ಸ್ಪ್ಲೈಸರ್‌ಗೆ ಜೋಡಿಸಿ, ಎರಡು ತುದಿಗಳನ್ನು ಬ್ಲೇಡಿನಿಂದ ಕೆರೆಸಿ ಅಂಟು (ಸ್ಪಿರಿಟ್) ಹಾಕಿ ಜೋಡಿಸಿ ಸ್ವಲ್ಪ ಹೊತ್ತು ಆರಲು ಬಿಟ್ಟು, ಮತ್ತೆ ಅದನ್ನು ಪ್ರೊಜೆಕ್ಟರಿಗೆ ಹಾಕಿ ಫಿಲಂ ಮುಂದುವರಿಸಬೇಕಿತ್ತು. ಇದರಿಂದ ಫಿಲಂ ನೋಡುವವರಿಗೆ

ಕಿರಿಕಿರಿಯಾಗಬಾರದೆಂದು ಅಜ್ಜ ಬಿಡುವಾದಾಗಲೆಲ್ಲ ಒಂದೊಂದೇ ಫಿಲಂ ಅನ್ನು ರಿವೈಂಡರಿಗೆ ಹಾಕಿ ಅದರ ಹಿಡಿಯನ್ನು ಜೋರಾಗಿ ತಿರುಗಿಸುತ್ತಿದ್ದರು. ಹೀಗೆ ಮಾಡುವುದರಿಂದ ಫಿಲಂ ದುರ್ಬಲವಾಗಿದ್ದ ಭಾಗದಲ್ಲಿ ಅದು ತುಂಡಾಗುತ್ತದೆ. ಅಥವಾ ಅಂಚುಗಳು ಹರಿದುಹೋಗಿದ್ದರೆ ಅದನ್ನು ಪತ್ತೆಹಚ್ಚುವುದೂ ಸುಲಭ. ಹಾಗಾದಾಗ ಅಜ್ಜ ಸ್ಪ್ಲೈಸರ್ ಮೂಲಕ ಫಿಲಂ ಅನ್ನು 'ದುರಸ್ತಿಗೊಳಿಸಿ' ಅದನ್ನು 'ಪ್ರದರ್ಶನಯೋಗ್ಯ' ಸ್ಥಿತಿಗೆ ತರುತ್ತಿದ್ದರು. ಗಾಂಧೀಜಿ ಚರಕದಲ್ಲಿ ನೂಲುವ ಚಿತ್ರ ನೆನಪಿಸಿಕೊಳ್ಳಿ. ಅಜ್ಜನೂ ಹಾಗೆಯೇ ಚರಕದಂತಿರುವ ರಿವೈಂಡರಿನಲ್ಲಿ ಫಿಲಂ ತಿರುಗಿಸುತ್ತಾ ಅದನ್ನೇ ತದೇಕಚಿತ್ತದಿಂದ ಗಮನಿಸುತ್ತಾ ಕೂತಿರುತ್ತಿದ್ದ ದೃಶ್ಯವನ್ನು ಮಂಗಳೂರು ಮನೆಗೆ ಬರುತ್ತಿದ್ದ ಅನೇಕರು ನೋಡಿರಬಹುದು.

ಅಜ್ಜ ಇಷ್ಟೆಲ್ಲ ಮುಂಜಾಗ್ರತೆ ವಹಿಸಿ ಫಿಲಂ ಅಣಿಗೊಳಿಸಿ ಪ್ರೊಜೆಕ್ಟರ್ ಆನ್ ಮಾಡಿದರೆ, ಕೆಲವೇ ನಿಮಿಷಗಳಲ್ಲಿ ಒಂದೋ ಪ್ರೊಜೆಕ್ಟರ್ 'ಢಂ' ಅಂದುಬಿಡುತ್ತಿತ್ತು ಅಥವಾ ಫಿಲಂ ತುಂಡಾಗಿ ಪರದೆಯಲ್ಲಿ ಚಿತ್ರ ಕಣ್ಮರೆಯಾಗುತ್ತಿತ್ತು. ಭಕ್ತಿಪೂರ್ವಕ, ಭಾವಪೂರ್ಣವಾಗಿ 'ಸ್ವಾಮಿಯ ಚಿತ್ರ' ನೋಡುತ್ತಿದ್ದ ಅಜ್ಜಿಗೆ ತೀವ್ರ ರಸಭಂಗವಾಗಿ ಎದ್ದುಹೋಗುತ್ತಿದ್ದರು.

ಕೊನೆ ಕೊನೆಗೆ ಆ ಪ್ರೊಜೆಕ್ಟರ್ ಎಷ್ಟು ಕೆಟ್ಟಿತ್ತೆಂದರೆ ಎಲ್ಲಿ ಮುಟ್ಟಿದರಲ್ಲಿ ಶಾಕ್ ಹೊಡೆಯುತ್ತಿತ್ತು. ಸ್ಟೆಬಿಲೈಸರ್ ಕೂಡಾ ಕೆಟ್ಟಿತ್ತು. ಆದರೂ ಅಜ್ಜನಿಗೆ ಮಾತ್ರ ಅದರ ಮೇಲಿನ ಪ್ರೀತಿ ಎಳ್ಳಷ್ಟೂ ಕಡಿಮೆಯಾಗಲಿಲ್ಲ.

ಹೀಗೊಂದು ದಿನ ಅಜ್ಜನಿಗೆ ಹೊಸ ಯೋಚನೆ ಬಂತು (ಯಾರೋ ಹೇಳಿದ್ದಿರಬೇಕು). ಈ ಫಿಲಂಗಳನ್ನು ವೀಡಿಯೋಗೆ ಪರಿವರ್ತಿಸಿದರೆ ಹೇಗೆ? ಆದರೆ ಅದು ಅಷ್ಟೊಂದು ಸರಳವಾದ ಕೆಲಸವಾಗಿರಲಿಲ್ಲ. ಅಜ್ಜ ಆ ನಿಟ್ಟಿನಲ್ಲಿ ಕೆಲಸ ಆರಂಭಿಸಿದರು. ತಮ್ಮಲ್ಲಿರುವ ಫಿಲಂಗಳಲ್ಲಿ ಮಹತ್ವಪೂರ್ಣವಾದವುಗಳನ್ನು ಆರಿಸಿ ಅವುಗಳನ್ನು ದುರಸ್ತಿಗೊಳಿಸಿ ವೀಡಿಯೋಗೆ ಪರಿವರ್ತಿಸುವುದಕ್ಕೆಂದು ಗೆಳೆಯರೊಬ್ಬರಿಗೆ ಕೊಟ್ಟಿದ್ದರೆಂದು ನನ್ನ ನೆನಪು.

◆



ರಮೇಶ್‌ಚಂದ್ರ ಹಾರ್ವೆ ಹಾಗೂ ಮಾಣಿಕ್ಯ ಪಡಿವಾಳ್ ಮಂಗಳೂರು ಅಜ್ಜನ ಆತ್ಮೀಯ ಸ್ನೇಹಿತರು. ಜೇನು-ಮೀನು ಹವ್ಯಾಸಗಳಲ್ಲಿ ಮೂವರಿಗೂ ಸಮಾನ ಆಸಕ್ತಿ.



ಸ್ನೇಹಿತರೊಂದಿಗೆ ಅಜ್ಜ (ಎಡದಲ್ಲಿ).

# ಅಜ್ಜ ಮತ್ತು ಕಾರು

ಅಜ್ಜನೊಂದಿಗೆ ಒಡನಾಡಿದವರು ಅವರ ಕಾರ್ ಡ್ರೈವಿಂಗ್ ಮರೆಯುವಂತಿಲ್ಲ. ಹಾಗಿತ್ತು ಅಜ್ಜನ ಡ್ರೈವಿಂಗ್. ಹಾರ್ವೆ, ಪಾವಂಜೆ, ನಾರಾಯಣ ರಾವ್ ಮೊದಲಾದವರು ಈಗಲೂ ಅಜ್ಜನ 'ರಾಕೆಟ್ ಸ್ಪೀಡ್' ನೆನಪಿಸಿಕೊಳ್ಳುತ್ತಾರೆ.

ಅಜ್ಜ 1953ರ ಸುಮಾರಿಗೆ ಮೊದಲ ಕಾರು - 'ಫಿಯೆಟ್' ಕೊಂಡುಕೊಂಡರು. 2-3 ಬಾರಿ ಫಿಯೆಟ್ ಬದಲಿಸಿ ಮುಂದೆ 1962ರಲ್ಲಿ 'ಸ್ಟಾಂಡರ್ಡ್ ಹೆರಾಲ್ಡ್' ಖರೀದಿಸಿದರು. ಎರಡು ಬಾಗಿಲಿನ (ಟು ಡೋರ್) ಆ ಕಾರು ಮಂಗಳೂರಿನ ಮೊದಲ 'ಸ್ಟಾಂಡರ್ಡ್'. ಆ ಬಳಿಕ ಮತ್ತೆ 'ಫಿಯೆಟ್'. ಬಂಗಾರದ ಬಣ್ಣದ ಆ ಕಾರು 1985ರ ತನಕವೂ ಅಜ್ಜನ ಬಳಿ ಇತ್ತು.

ವೇಗದ ಚಾಲನೆಗೆ ಹೆಸರಾಗಿದ್ದ ಅಜ್ಜನಿಗೆ ಕಾರ್ ಡ್ರೈವಿಂಗ್ ಎಂದೂ ದಣಿವೆನಿಸುತ್ತಿರಲಿಲ್ಲ. ಅವರು ಕಾರಿನಲ್ಲಿಯೇ ಸಾಕಷ್ಟು ಸಲ ಪುಟ್ಟಪರ್ತಿಗೆ ಹೋಗಿದ್ದರು. ಹೈದರಾಬಾದ್, ತಿರುವನಂತಪುರಂ, ಮದರಾಸ್, ಬಿಜಾಪುರ ಮುಂತಾದೆಡೆಗಳಿಗೂ ಅಜ್ಜ 'ಕಾರು ಪಯಣ' ಕೈಗೊಂಡಿದ್ದರು. ತಾವು ಏರ್ಪಡಿಸುತ್ತಿದ್ದ ಚಲನಚಿತ್ರ ಪ್ರದರ್ಶನಗಳಿಗೂ ಅವರು ಕಾರಿನಲ್ಲಿಯೇ ಪ್ರೊಜೆಕ್ಟರ್, ಫಿಲಂ ತುಂಬಿ ಓಡಾಡುತ್ತಿದ್ದರು.

ನನಗೆ ಅಜ್ಜನ 'ಕಾರಿನ ಕಾರುಬಾರು'ಗಳು ಅಚ್ಚರಿಯೆನಿಸಿದರೂ 'ಕಾರಿಲ್ಲದ ಅಜ್ಜ'ನ ಸರಳತೆಯೇ ಹೆಚ್ಚು ಇಷ್ಟವಾಗುತ್ತದೆ. ನಾನು ಅಜ್ಜನ ಸಂಪರ್ಕಕ್ಕೆ ಬಂದಾಗ ಅವರಲ್ಲಿ ಕಾರಿರಲಿಲ್ಲ. ಆ ಮೊದಲು ಅವರಲ್ಲಿ ಕಾರಿತ್ತು ಎಂಬುದರ ಯಾವ ಲಕ್ಷಣಗಳೂ ಅವರ ಮಾತುಗಳಲ್ಲಾಗಲೀ ನಡವಳಿಕೆಯಲ್ಲಾಗಲೀ ವ್ಯಕ್ತವಾಗುತ್ತಿರಲಿಲ್ಲ. 'ಕಾರಿಲ್ಲ' ಎಂಬ ಬಗ್ಗೆ ಕಿಂಚಿತ್ತೂ ಕೊರಗು ಅವರಿಗೆ ಇರಲಿಲ್ಲ.

ಅಜ್ಜ ಸಿಟಿ ಬಸ್ಸಿನಲ್ಲೇ ಓಡಾಡುತ್ತಿದ್ದರು. ಸಾಕಷ್ಟು ನಡೆಯುತ್ತಿದ್ದರು. ಊರಿಗೆ ಹೋಗುವ ಸಂದರ್ಭಗಳಲ್ಲೂ ಅಜ್ಜ ಬಸ್ಸಿನಲ್ಲೇ ಪ್ರಯಾಣಿಸುತ್ತಿದ್ದರು. ಕೊನೆಕೊನೆಗೆ ಅವರ ದೇಹಾರೋಗ್ಯ ಕ್ಷೀಣಿಸತೊಡಗಿದಾಗಲೂ ಅಜ್ಜ ನಡೆಯುವುದನ್ನು ಬಿಡಲಿಲ್ಲ. ಅವರು ಎಷ್ಟೇ ಓಡಾಡಿದರೂ, ಎಷ್ಟೇ ಕೆಲಸ ಮಾಡಿದರೂ ಒಂದು ಬಾರಿಯಾದರೂ ದಣಿವನ್ನು ವ್ಯಕ್ತಪಡಿಸಿದ್ದು ಅಥವಾ 'ಉಸ್ಸಪ್ಪಾ' ಅಂತ ಕುಳಿತದ್ದನ್ನು ನಾನಂತೂ ಕಂಡಿಲ್ಲ.

◆



# ಪ್ರೇಮಪಕ್ಷಿಗಳಿಗೆ ವಿದಾಯ - ಕಾಗೆ ಬಳಗಕ್ಕೆ ಸ್ವಾಗತ

1964ರಲ್ಲಿ ಅಜ್ಜ ಹೈದರಾಬಾದ್‌ಗೆ ಭೇಟಿ ನೀಡಿದ್ದ ಸಂದರ್ಭದಲ್ಲಿ ಅವರ ಗಮನ ಸೆಳೆದದ್ದು ಲವ್ ಬರ್ಡ್ಸ್. ಈ ಮೋಹಕ ಹಕ್ಕಿಗಳ ಬೆಡಗಿಗೆ ಮಾರುಹೋದ ಅಜ್ಜ ಮಂಗಳೂರಿಗೆ ಬಂದವರೇ ಮನೆಯಂಗಳದಲ್ಲಿ ದೊಡ್ಡ ಪಂಜರ ಮಾಡಿ ಲವ್ ಬರ್ಡ್ಸ್ ಸಾಕುವುದಕ್ಕೆ ಶುರುಮಾಡಿದರು. ಪುಟ್ಟ ಹಕ್ಕಿಗಳನ್ನೂ ಅವುಗಳಿಗೆ ಬೇಕಾದ ಆಹಾರವನ್ನೂ ಮದರಾಸಿನಿಂದ ತರಿಸುತ್ತಿದ್ದರು. ಸುಮಾರು 40-50 ಜೋಡಿ ಲವ್ ಬರ್ಡ್ಸ್ ಅಜ್ಜನ ಅಂಗಳದಲ್ಲಿ ಪ್ರೀತಿಹಾಡು ಹಾಡುತ್ತಿದ್ದವು. ಆದರೆ ಕ್ರಮೇಣ ಹಕ್ಕಿಗಳಿಗೆ ಬೇಕಾದ ಆಹಾರ ಸರಿಯಾಗಿ ಸಿಗುತ್ತಿಲ್ಲ ಎಂಬ ಕಾರಣದಿಂದ ಅಜ್ಜ ಲವ್ ಬರ್ಡ್ಸ್ ಪ್ರಪಂಚಕ್ಕೆ ವಿದಾಯ ಹೇಳಿದರು.



(ಮಾಹಿತಿ : ಕೃಷ್ಣಕುಮಾರ್ ಪೈಲೂರು)

ಲವ್ ಬರ್ಡ್ಸ್ ಬೀಳ್ಕೊಟ್ಟ ಅಜ್ಜ ಕಾಗೆಗಳನ್ನು ಕೈಬೀಸಿ ಕರೆದರು. ಪ್ರತಿದಿನ ಬೆಳಿಗ್ಗೆ ತಿಂಡಿ ತಿನ್ನುವ ಮೊದಲು ಅಜ್ಜ ಒಂದಿಷ್ಟು ತಿಂಡಿಯನ್ನು ಕೈಯಲ್ಲಿ ಹಿಡಿದು ಮನೆಯ ಹಿಂದಿನ ಅಂಗಳಕ್ಕೆ ಹೋಗಿ ಕಾ ಕಾ ಎಂದು ಕರೆಯುತ್ತಿದ್ದರು. ಅಕ್ಕಪಕ್ಕದ ತೆಂಗಿನ ಮರಗಳ ಮೇಲೆ ಕಾಯುತ್ತ ಕೂತಿರುತ್ತಿದ್ದ ಮೂರ್ನಾಲ್ಕು ಕಾಗೆಗಳು ಅಜ್ಜನತ್ತ ಹಾರಿ ಬರುತ್ತಿದ್ದವು. ಅಜ್ಜ ಅವುಗಳತ್ತ ತಿಂಡಿ ಎಸೆದು ಒಳಬಂದ ನಂತರ ತಾವು ತಿಂಡಿ ತಿನ್ನುತ್ತಿದ್ದರು.



ದಿವ್ಯಾ ಹೇಳುವಂತೆ, 'ಅಜ್ಜನಿಗೆ ನಿತ್ಯ ಬರುತ್ತಿದ್ದ ಕಾಗೆಗಳ ಪರಿಚಯವೂ ಇತ್ತು. ಒಂದು ಕಾಗೆ ಆರಂಭದಲ್ಲಿ ತಿನ್ನದೆ ಕೊನೆಯ ತುತ್ತು ತಿಂದು ಹೋಗುತ್ತಿತ್ತು. ಆ ಕಾಗೆಯನ್ನು ಅಜ್ಜ ತೋರಿಸಿ ಅದರ ಕ್ರಮವನ್ನು ವಿವರಿಸುತ್ತಿದ್ದರು.' ಕಾಗೆಗಳ ಮೇಲಿನ ಅಜ್ಜನ ಪ್ರೇಮಕ್ಕೆ ಏನು ಕಾರಣವೋ ತಿಳಿಯದು. ◆

## ಕಂದಡಿ ಕಡಿದಾಗ -

1936ರ ಒಂದು ದಿನ ಕೊಡಗಿನ ಭಾಗಮಂಡಲದಲ್ಲಿ ನಡೆದ ಘಟನೆಯಿದು. ಕಾಡಿನಲ್ಲಿ ಜೇನುಕುಟುಂಬಗಳನ್ನು ನಾಡಿಗೆ ತಂದು ಗೂಡುಗಳಲ್ಲಿ ಸಾಕುವುದೆಂದರೆ ಅದೊಂದು ಹುಚ್ಚು ಎಂದು ಕರೆಯುತ್ತಿದ್ದ ಕಾಲವದು. ಜೇನುಸಾಕಣೆಯನ್ನು ಜನಪ್ರಿಯಗೊಳಿಸಲು ಕೊಡಗು ಸರಕಾರ ನೇಮಿಸಿದ್ದ ಪ್ರಥಮ ಜೇನು ಪರಿವೀಕ್ಷಕರಾಗಿದ್ದ ಮಂಗಳೂರು ಅಜ್ಜ ಜೇನುಗೂಡೊಂದರ ಮುಚ್ಚಳ ತೆಗೆದು ಜೇನುಕುಟುಂಬದ ಪರೀಕ್ಷೆಗೆ ಮುಂದಾದದ್ದೇ ತಡ, ಗೂಡಿನ ಅಡಿಹಲಗೆಯಲ್ಲಿ ಮಲಗಿದ್ದ ಕಂದಡಿ ಹಾವು ತಟಕ್ಕನೆ ಅವರ ಎಡಗೈ ತೋರುಬೆರಳನ್ನು ಕಡಿದೇ ಬಿಟ್ಟಿತು. ಮಡಿಕೇರಿ ಆಸ್ಪತ್ರೆಯಲ್ಲಿನ ತುರ್ತು ಚಿಕಿತ್ಸೆ ಅವರ ಜೀವ ಉಳಿಸಿತು. ಆದರೆ ವಿಷದ ನಂಜು ಇಳಿಯಲೇ ಇಲ್ಲ. ಬೆರಳು ಕೊಳೆಯುವ ಸ್ಥಿತಿ ಬಂದಾಗ ಅನಿವಾರ್ಯವಾಗಿ ಬೆರಳು ತುಂಡರಿಸಲೇಬೇಕಾಯಿತು. ಬೆರಳು ಮೊಂಡಾದರೂ 24ರ ಉತ್ಸಾಹಿ ಧೃತಿಗೆಡಲಿಲ್ಲ. ಜೇನುಪ್ರಚಾರ ಮುಂದುವರಿಸಿದರು. ◆



# ಅಜ್ಜ ಮತ್ತು ಮೆಲ್ಲಿಫೆರಾ

1990ರ ಸುಮಾರಿಗೆ ತೊಡುವೆ ಜೇನುಕುಟುಂಬಗಳಿಗೆ ಥ್ಯಾ ಸ್ಯಾಕ್‌ಬ್ರೂಡ್ ರೋಗ ತಗುಲಿ ಕೊಡಗು ಹಾಗೂ ಕರಾವಳಿಯಲ್ಲಿ ಜೇನುಸಾಕಣೆ ಅವಸಾನದ ಅಂಚನ್ನು ತಲುಪಿದಾಗ ಉತ್ತರ ಭಾರತದಿಂದ ಎಪಿಸ್ ಮೆಲ್ಲಿಫೆರಾ ಜಾತಿಯ ಜೇನುಕುಟುಂಬಗಳನ್ನು ತರಿಸುವ ಪ್ರಯತ್ನಗಳು ಆರಂಭವಾದವು. ಸ್ಥಳೀಯ ಪರಿಸರಕ್ಕೆ ಪೂರಕವಲ್ಲದ ಮೆಲ್ಲಿಫೆರಾಕ್ಕಿಂತ ರೋಗನಿರೋಧಕ ತೊಡುವೆ ಕುಟುಂಬಗಳನ್ನೇ ಅಭಿವೃದ್ಧಿಪಡಿಸುವುದು ಸೂಕ್ತ ಎಂಬ ಅಭಿಪ್ರಾಯಗಳು ವಿವಿಧ ವಲಯಗಳಲ್ಲಿ ಕೇಳಿಬಂದವು.

ಆದರೆ ಮೆಲ್ಲಿಫೆರಾ ಪರ ಪ್ರಚಾರ ಜೋರಾಗಿ ನಡೆಯುತ್ತಿದ್ದುದರಿಂದ ಅಜ್ಜನೂ ಅದರತ್ತ ಒಲವು ತೋರಿದರು. 'ಜೇನುವ್ಯವಸಾಯದ ಉಳಿವು ಮುಖ್ಯ. ಮೆಲ್ಲಿಫೆರಾ ಕುಟುಂಬಗಳು ಅಧಿಕ ಜೇನು ಉತ್ಪಾದಿಸುತ್ತವೆ ಎಂದಾದರೆ ಇಲ್ಲಿಗೆ ಯಾಕೆ ತರಬಾರದು?' ಎಂಬ ನಿಲುವು ಅಜ್ಜನದ್ದು. 'ನೀವೇ ಹಾಗೆ ಒಪ್ಪಿಗೆ ನೀಡಿದರೆ ಮೆಲ್ಲಿಫೆರಾ ಸಾಕಣೆಗೆ ಶಿಫಾರಸ್ ನೀಡಿದಂತಾಗುತ್ತದೆ' ಎಂದು ನಾನು ಅಜ್ಜನಿಗೆ ಅನೇಕ ಬಾರಿ ಹೇಳಿದರೂ ಅವರಿಗೆ ಮೆಲ್ಲಿಫೆರಾ ವಿರೋಧಿ ಧೋರಣೆ ಮನವರಿಕೆ ಆದಂತೆ ಕಾಣಲಿಲ್ಲ. ನಾನೂ ಸುಮ್ಮನಾದೆ.

ಅಜ್ಜ ಸ್ವತಃ ಮೆಲ್ಲಿಫೆರಾ ಸಾಕುವುದಕ್ಕೆ ಮುಂದಾದರು. ಪಶ್ಚಿಮ ಬಂಗಾಳದಿಂದ ತರಿಸಿದ್ದ ಕೆಲವು ಮೆಲ್ಲಿಫೆರಾ ಕುಟುಂಬಗಳ ಪೈಕಿ ಒಂದು ಗೂಡು ಮಂಗಳೂರು ಮನೆಗೂ ಬಂತು. ಅಜ್ಜ ಬಹಳ ಮುತುವರ್ಜಿಯಿಂದ ಅದರ 'ಆರೈಕೆ'ಯಲ್ಲಿ ತೊಡಗಿದರು. ತೊಡುವೆಗಿಂತ ಗಾತ್ರದಲ್ಲಿ ದೊಡ್ಡದಾಗಿರುವ ಮೆಲ್ಲಿಫೆರಾ ಜೇನ್ನೊಣಗಳು ಸಹಜವಾಗಿಯೇ ಹೆಚ್ಚಿನ ಪ್ರಮಾಣದಲ್ಲಿ ಜೇನು ಸಂಗ್ರಹಿಸಬಹುದೆಂಬುದು ಅಜ್ಜನ ಲೆಕ್ಕಾಚಾರ. ಆದರೆ ದಿನಕಳೆದಂತೆ ಮೆಲ್ಲಿಫೆರಾ ಕುಟುಂಬ ಕ್ಷೀಣಿಸತೊಡಗಿತು. ಪರಿಸ್ಥಿತಿ ಬಿಗಡಾಯಿಸುವ ಹಂತ ತಲುಪಿದಾಗ ಅಜ್ಜ ಅದಕ್ಕೆ 'ಫೀಡಿಂಗ್' (ಕೃತಕವಾಗಿ ಆಹಾರ ಕೊಡುವುದು) ಕೂಡಾ ಮಾಡತೊಡಗಿದರು. ಸಕ್ಕರೆ ಪಾಕ ತಿಂದುಂಡ ಮೆಲ್ಲಿಫೆರಾ ನೊಣಗಳು ಪುಷ್ಟಿಗೊಳ್ಳುವ ಬದಲು ಇನ್ನಷ್ಟು ಸೊರಗತೊಡಗಿದವು. ಕೊನೆಗೊಂದು ದಿನ ಆ ಗೂಡು ಬರಿದಾಯಿತು.

'ಮೆಲ್ಲಿಫೆರಾ ಕುಟುಂಬ ಕ್ಷೀಣಿಸುವುದಕ್ಕೆ ಪರಾಗದ ಅಭಾವವೇ ಕಾರಣ' ಎಂದು ತೀರ್ಮಾನಿಸಿದ ಅಜ್ಜ 'ಕಾಯಿಲೆಯಿಲ್ಲದ, ವಸತಿ ಹುಡುಕುತ್ತ ಬರುವ ತೊಡುವೆ ಕುಟುಂಬಗಳು ಸುಲಭವಾಗಿ ಒಂದೆಡೆ ನೆಲೆಸುವಂತೆ ಮಾಡಲು ಮರದ ಗೆಲ್ಲುಗಳ ಮಧ್ಯೆ ಮಡಿಕೆಗಳನ್ನಿಡುವುದು ಸೂಕ್ತ' ಎಂಬ ಅಭಿಪ್ರಾಯಕ್ಕೆ ಬಂದರು. 'ಮಧುಪ್ರಪಂಚ'ದಲ್ಲಿ (ಜೂನ್ 2000) ಈ ಕುರಿತು ಲೇಖನವನ್ನೂ ಬರೆದರು. ಅಜ್ಜ ಅನುಭವದಿಂದ ಕಂಡುಕೊಂಡ ಸಂಗತಿಯನ್ನು ಒಪ್ಪಿಕೊಂಡು ತಮ್ಮ ನಿಲುವನ್ನು ಬದಲಾಯಿಸಿದ ಈ ಪ್ರಸಂಗ ಅವರ ಸಕಾರಾತ್ಮಕ ಧೋರಣೆಯನ್ನು ಬಿಂಬಿಸುತ್ತದೆ. ◆

# ಆತ್ಮ ಕಥನ

ಅಜ್ಜನ ಬಗ್ಗೆ ಲೇಖನ ಬರೆಯಲು ಹೊರಟ ನನಗೆ 'ಅಜ್ಜನನ್ನು ಬರಿಯ ಲೇಖನದಲ್ಲಿ ಹಿಡಿಯುವುದು ಕಷ್ಟ' ಎಂದು ಅರಿವಾಗಲು ಹೆಚ್ಚು ಸಮಯ ಬೇಕಾಗಲಿಲ್ಲ. 'ಒಂದು ಪುಸ್ತಕವನ್ನೇ ಬರಿ' ಎಂದರು ಜಿ.ಎಸ್. ಉಬರಡ್ಕ. ಅದಕ್ಕೆಂದು ವಿಷಯ ಸಂಗ್ರಹಿಸತೊಡಗಿದರೆ ನನಗೆ ಎಲ್ಲಿಂದ ಆರಂಭಿಸಬೇಕೆಂದೇ ತಿಳಿಯದೆ ಗೊಂದಲಕ್ಕೆ ಬಿದ್ದೆ. ಅಜ್ಜನ ಕಾರ್ಯಸಾಧನೆಯ ಹರವು ಅಷ್ಟು ವಿಶಾಲವಾಗಿತ್ತು.

ಕೊನೆಗೊಂದು ದಿನ, 'ಅಜ್ಜ ನೀವೇ ಯಾಕೆ ಆತ್ಮಕಥನ ಬರೆಯಬಾರದು?' ಎಂಬ ಪ್ರಶ್ನೆ ಮುಂದಿಟ್ಟೆ. ಅಜ್ಜ ಸ್ಪಷ್ಟವಾಗಿ ಉತ್ತರಿಸಲಿಲ್ಲ. ಮತ್ತೆ ಅದೇ ಪ್ರಶ್ನೆ ಹಾಕಿದಾಗ, 'ಹಾಗೆ ಬರೆದರೆ ಅದರಿಂದ ಕೆಲವರಿಗೆ ನೋವಾಗಬಹುದು. ಅದು ನನಗ ಇಷ್ಟವಿಲ್ಲ' ಎಂದರು. 'ಹಾಗಾದರೆ ಆತ್ಮಕಥನ ಅಂತ ಬರೆಯಬೇಡಿ. ನಿಮ್ಮ ಬದುಕಿನುದ್ದಕ್ಕೂ ನೀವು ಕಂಡ, ಅನುಭವಿಸಿದ ಸ್ವಾರಸ್ಯಕರ ಸಂಗತಿಗಳನ್ನಷ್ಟೇ ಬರೆಯಿರಿ' ಎಂದೆ. ಅಜ್ಜ ಅದಕ್ಕೆ ಸಮ್ಮತಿಸಿದರು.

'ಚೊಕ್ಕಾಡಿ ಎಂಬ ಊರು...' ಎಂದು ಆರಂಭಿಸಿದ ಅಜ್ಜನ ಬರವಣಿಗೆ ನಾಲ್ಕು ಪುಟಗಳಿಗೇ ಸ್ಥಗಿತಗೊಂಡಿತು. ಆ ಕಾಲದಲ್ಲಿ ಚೊಕ್ಕಾಡಿ ಹೇಗಿತ್ತೆಂದು ವಿವರಿಸಿದ ಅಜ್ಜ, ಜೇನುವ್ಯವಸಾಯದ ಆರಂಭದ ದಿನಗಳನ್ನೂ ಮೆಲುಕು ಹಾಕಿದ್ದಾರೆ.

ಅಷ್ಟರಲ್ಲಿ (1997) ನಾನು ಧಾರವಾಡಕ್ಕೆ ಬಂದಿದ್ದೆ. ನಂತರ ಮಂಗಳೂರಿಗೆ ಹೋಗಿದ್ದಾಗ ಅಜ್ಜನಲ್ಲಿ ಮೊದಲಿದ್ದ ಲವಲವಿಕೆ ಕಂಡುಬರಲಿಲ್ಲ. 'ನೀವು ಬರೆಯುವುದು ಬೇಡ; ಹೇಳುತ್ತ ಹೋಗಿ. ನಾನು ರೆಕಾರ್ಡ್ ಮಾಡಿಕೊಂಡು ಅದನ್ನು ಲೇಖನರೂಪಕ್ಕೆ ತರುತ್ತೇನೆ' ಎಂದೆ. ಅಜ್ಜ ಒಪ್ಪಿದರು. ಟೇಪ್ ರೆಕಾರ್ಡರ್ ಆನ್ ಮಾಡಿದರೆ ಅಜ್ಜ ಹೇಳಿದ್ದು ಬೇರೆಯೇ ವಿಚಾರ. ತಮ್ಮ ಅಂತಿಮ ಸಂದೇಶವೋ ಎಂಬಂತೆ ಮೂರ್ನಾಲ್ಕು ನಿಮಿಷ ಮಾತನಾಡಿದರು. ಅದನ್ನು ಕೇಳಿದ ನನಗೆ ಅಜ್ಜನನ್ನು ಮತ್ತೆ ಪ್ರಶ್ನಿಸಬೇಕೆಂದು ಅನ್ನಿಸಲಿಲ್ಲ.

ಅಜ್ಜನ 'ಸಂದೇಶ'ವನ್ನು ನಾನು ಕಾಗದಕ್ಕಿಳಿಸಿದ್ದು ತೀರ ಇತ್ತೀಚೆಗೆ; ಅಜ್ಜ ನಮ್ಮನ್ನಗಲಿದ ಬಳಿಕ. ಅಜ್ಜನ ಮಾತುಗಳು ಪುಸ್ತಕದ ಕೊನೆಯಲ್ಲಿವೆ (ಪುಟ 111). ◆



# ಮಂಗಳೂರು ಅಜ್ಜ-ಒಂದು ಆತ್ಮೀಯ ನುಡಿಚಿತ್ರ

## ಪೈಲೂರು ಲಕ್ಷ್ಮೀನಾರಾಯಣ ರಾವ್ ಸ್ಮರಣೆ

ಅಗಲಿದ ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರ ನೆನಪಿನಲ್ಲಿ ಜನವರಿ 5, 2003ರಂದು ಮಂಗಳೂರಿನ ಪೈಲೂರು ಮನೆಯ ಆವರಣದಲ್ಲಿ ವಿಶೇಷ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಜೇನು-ಮೀನು-ಹೂಗಿಡಗಳ ಮಂಗಳೂರು ಅಜ್ಜನ ಅಸ್ತಂಗತ ಅವರು ನಡೆದುಬಂದ ಹಾದಿಗೆ ಪೂರ್ಣ ವಿರಾಮವಾಗಬಾರದು; ಅಜ್ಜನ ಸಾಧನೆ ಎಳೆಯ ತಲೆಮಾರಿಗೆ ದಾರಿದೀಪವಾಗಬೇಕು ಎಂಬ ಆಶಯದೊಂದಿಗೆ ಈ ಕಾರ್ಯಕ್ರಮ ಏರ್ಪಡಿಸಲಾಗಿತ್ತು.

ದಕ್ಷಿಣ ಕನ್ನಡ ಜಿಲ್ಲೆಗೆ ಅನೇಕ ಹೊಸತುಗಳನ್ನು ಪರಿಚಯಿಸಿದ ಲಕ್ಷ್ಮೀನಾರಾಯಣ ರಾವ್ ಅವರ ವ್ಯಕ್ತಿತ್ವ ಸಾಧನೆಯನ್ನು ಬಿಂಬಿಸುವ ಛಾಯಾಚಿತ್ರ ಪ್ರದರ್ಶನ ಹಾಗೂ ಅವರು ಸಂಗ್ರಹಿಸಿದ್ದ ಅಂಚೆಚೀಟಿಗಳ ಪ್ರದರ್ಶನವನ್ನು ಆಗಿನ ಜಿಲ್ಲಾಧಿಕಾರಿ ಎ.ಕೆ. ಮೊನ್ನಪ್ಪ ಉದ್ಘಾಟಿಸಿದರು. ಸರಳ ಬದುಕಿನ ಹಾಗೂ ಗಾಂಧೀವಾದಿಯಾಗಿದ್ದ ಪೈಲೂರು ಲಕ್ಷ್ಮೀನಾರಾಯಣ ರಾವ್ ಓರ್ವ ಮಾನವತಾವಾದಿಯಾಗಿದ್ದರು; ಬಹುಮುಖ ಪ್ರತಿಭೆಯ ಅವರ ಸಾಧನೆ ಈಗಿನ ಪೀಳಿಗೆಗೆ ಪ್ರೇರಣೆಯಾಗಬೇಕು ಎಂದು ಅವರು ಹೇಳಿದರು. ರಾವ್ ಅವರ ಜೀವನ ಚರಿತ್ರೆ ಮತ್ತು ಸಾಧನೆಗಳನ್ನು ಮುಂದಿನ ತಲೆಮಾರಿಗೆ ಪರಿಚಯಿಸುವ ದೃಷ್ಟಿಯಿಂದ ಅವರ ಹೆಸರಿನಲ್ಲಿ ಒಂದು ಶಾಶ್ವತ ಮ್ಯೂಸಿಯಂ ಸ್ಥಾಪಿಸಬೇಕು. ಈ ಕಾರ್ಯಕ್ಕೆ ಜಿಲ್ಲಾಡಳಿತದಿಂದ ಅಗತ್ಯ ನೆರವು ನೀಡಲು ಸಿದ್ಧ ಎಂದು ಮೊನ್ನಪ್ಪ ತಿಳಿಸಿದರು. ಪರಮೇಶ್ವರಿ ಪೈಲೂರು ಹಾಗೂ ಪೈಲೂರು ಮಹಾಬಲೇಶ್ವರಯ್ಯ ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಮಂಗಳೂರು ಅಜ್ಜ ತಮ್ಮ ಜೀವಿತಾವಧಿಯಲ್ಲಿ ವಿವಿಧ ಕ್ಷೇತ್ರಗಳಲ್ಲಿ ಮಾಡಿರುವ ಸಾಧನೆ ಕುರಿತು ಅವರ ಆತ್ಮೀಯರು ಈ ಸಂದರ್ಭದಲ್ಲಿ ತಮ್ಮ ಅನಿಸಿಕೆ ಹಂಚಿಕೊಂಡರು. ಎಂ. ಮುಕುಂದ ಪ್ರಭು ಅವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಅಡಿಕೆ ಮಾರುಕಟ್ಟೆ, ಜೇನುಸಾಕಣೆ, ಅಂಚೆಚೀಟಿ ಸಂಗ್ರಹ, ಹೂದೋಟ, ಅಕ್ವೇರಿಯಂ ಮೀನುಸಾಕಣೆ, ಸತ್ಯಸಾಯಿ ಚಿಂತನೆ ಮುಂತಾದ ರಂಗಗಳಲ್ಲಿ ಅಜ್ಜನ

ಕಾರ್ಯಚಟುವಟಿಕೆ ಕುರಿತು ಬಿ.ಎಂ. ಇದಿನಬ್ಬ, ಕೋಟೆ ಲಕ್ಷ್ಮೀನಾರಾಯಣ, ಕೋಟೆ ವಸಂತಕುಮಾರ, ಎಂ. ಆರ್. ಪಾವಂಜೆ, ಜಿ.ಎಸ್. ಉಬರಡ್ಕ, ರಾ.ಮೊ. ವಿಶ್ವಾಮಿತ್ರ, ಪ್ರಸಾದ್ ರಕ್ಷಿದಿ, ಪಿ.ಜಿ. ಹೊಸಮನೆ, ಜಯರಾಮ ರೈ ಮಲ್ಲಾರ್, ಸೀತಾ ಕೆ. ಭಟ್, ಡಾ. ಕೆ.ಎಸ್. ಪ್ರಭಾಕರ ರಾವ್ ಮೊದಲಾದವರು ಮಾತನಾಡಿದರು.

ಮಂಗಳೂರು ಅಜ್ಜ ಉಪಯೋಗಿಸುತ್ತಿದ್ದ ಪ್ರೊಜೆಕ್ಟರ್, ಟೈಪ್‌ರೈಟರ್, ಅವರಿಗೆ ಸಂದ ಪದಕಗಳು ಅವರ ಕೈಗಡಿಯಾರ, ಕನ್ನಡಕ, ಅಕ್ವೇರಿಯಂ ಮೊದಲಾದವುಗಳನ್ನು ಪ್ರದರ್ಶಿಸಲಾಗಿತ್ತು. ಸ್ವಾಗತ, ಕಾರ್ಯಕ್ರಮ ನಿರ್ವಹಣೆ - ಶಿವರಾಂ ಪೈಲೂರು. ವಂದನಾರ್ಪಣೆ: ರಕ್ಷಿತಾ ಶ್ರೀಕಾಂತ್. ◆



ಡಾ. ಕೆ.ಎಸ್. ಪ್ರಭಾಕರ ರಾವ್ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸುತ್ತಿರುವುದು.



ಛಾಯಾಚಿತ್ರ ಪ್ರದರ್ಶನದಲ್ಲಿ ಅತಿಥಿಗಳು, ಬಂಧುಗಳು.



# ಪೈಲೂರು ಲಕ್ಷ್ಮೀನಾರಾಯಣ ರಾವ್ ಹೆಸರಿನಲ್ಲಿ ರಾಜ್ಯಮಟ್ಟದ ಕೃಷಿಪತ್ರಿಕೋದ್ಯಮ ಪ್ರಶಸ್ತಿ ಪ್ರದಾನ

ಧಾರವಾಡದ ಪರ್ಯಾಯ ಕೃಷಿಮಾಧ್ಯಮ ಕೇಂದ್ರ ಸ್ಥಾಪಿಸಿರುವ ರಾಜ್ಯಮಟ್ಟದ ಕೃಷಿಪತ್ರಿಕೋದ್ಯಮ ಪ್ರಶಸ್ತಿಯನ್ನು 2003ನೇ ಸಾಲಿನಲ್ಲಿ ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರ ಹೆಸರಿನಲ್ಲಿ ಪ್ರದಾನ ಮಾಡಲಾಯಿತು.

ಕನ್ನಡದಲ್ಲಿ ಅರ್ಥಪೂರ್ಣ ಕೃಷಿಪತ್ರಿಕೋದ್ಯಮಕ್ಕೆ ಉತ್ತೇಜನ ನೀಡುವುದಕ್ಕಾಗಿ ಕೃಷಿಮಾಧ್ಯಮ ಕೇಂದ್ರ ಎರಡು ವಿಭಾಗಗಳಲ್ಲಿ ಪ್ರಶಸ್ತಿ ನೀಡುತ್ತಿದೆ. ಈ ಬಾರಿ ಕೃಷಿಕರ ವಿಭಾಗದಲ್ಲಿ ಗದಗ ಜಿಲ್ಲೆಯ ಡಿ.ಡಿ. ಭರಮಗೌಡ್ರ ಅವರ 'ಸಾವಯವ ಕೃಷಿಕನ ಕೃಷಿ ಅನುಭವಗಳು' (ಸಹಜ ಸಾಗುವಳಿ) ಲೇಖನ ಪ್ರಶಸ್ತಿಗಾಗಿ ಆಯ್ಕೆಯಾಗಿತ್ತು. ಮುಕ್ತ ವಿಭಾಗದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ನಾ. ಕಾರಂತ ಪೆರಾಜೆ ಮತ್ತು ಡಾ. ಎಸ್.ವಿ. ಕರುಣಾಕರ ಪ್ರಶಸ್ತಿಯನ್ನು ಹಂಚಿಕೊಂಡಿದ್ದರು. ನಾ. ಕಾರಂತ ಅವರ 'ಹರಿನೀರ ತಳಕು ಮನೆಮನೆ ಬೆಳಕು' (ಅಡಿಕೆ ಪತ್ರಿಕೆ) ಹಾಗೂ ಡಾ. ಕರುಣಾಕರ ಅವರ 'ಕೃಷಿಯಿಂದಲೇ ನೆಮ್ಮದಿಯ ಬದುಕು ಸಾಧ್ಯ' (ಅಡಿಕೆ ಪತ್ರಿಕೆ) ನುಡಿಚಿತ್ರಗಳು ಪ್ರಶಸ್ತಿಗೆ ಆಯ್ಕೆಗೊಂಡಿದ್ದವು.

1935ರಷ್ಟು ಹಿಂದೆಯೆ 'ಜೇನು ನೊಣ ಸಾಕುವಿಕೆ' ಪುಸ್ತಕ ಪ್ರಕಟಿಸಿದ್ದ ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರ ಸಂಪಾದಕತ್ವದಲ್ಲಿ 1957ರಲ್ಲಿ ಪುತ್ತೂರಿನಿಂದ ಪ್ರಕಟಗೊಳ್ಳುತ್ತಿದ್ದ 'ಮಧುವನ' ಪತ್ರಿಕೆ ಕನ್ನಡ ಕೃಷಿಪತ್ರಿಕೋದ್ಯಮದ ಆರಂಭದ ಪ್ರಯತ್ನಗಳಲ್ಲೊಂದು. ತಮ್ಮ ಕೊನೆಯ ದಿನಗಳವರೆಗೂ ಅವರು ಜೇನು ವ್ಯವಸಾಯಕ್ಕೆ ಸಂಬಂಧಿಸಿ ಲೇಖನಗಳನ್ನು ಬರೆಯುತ್ತಿದ್ದರು. ಕನ್ನಡ ಕೃಷಿಸಾಹಿತ್ಯಕ್ಕೆ ಅವರ ಕೊಡುಗೆ ಗಮನಾರ್ಹ. ಈ ಹಿನ್ನೆಲೆಯಲ್ಲಿ ದಿವಂಗತ ಲಕ್ಷ್ಮೀನಾರಾಯಣ ರಾವ್ ಅವರ ನೆನಪಿನಲ್ಲಿ ಕೃಷಿಪತ್ರಿಕೋದ್ಯಮ ಪ್ರಶಸ್ತಿ ನೀಡಲಾಯಿತು. ಪ್ರಶಸ್ತಿ ತಲಾ ಎರಡು ಸಾವಿರ ರೂಪಾಯಿ ನಗದು ಪುರಸ್ಕಾರ, ಪರಿಸರ ಶಿಲ್ಪ ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿತ್ತು. ಪ್ರಶಸ್ತಿಯ ಪ್ರಾಯೋಜನೆ: ಡಾ. ರಘುರಾಂ ಹೆಚ್.ವಿ. - ಜ್ಯೋತ್ಸ್ನಾ ರಘುರಾಂ.

ಕೃಷಿಪತ್ರಿಕೋದ್ಯಮ ಪ್ರಶಸ್ತಿಯ ಜೊತೆಗೆ ನೆಲ - ಜಲ ಸಂರಕ್ಷಣೆಯಲ್ಲಿ ಅನನ್ಯ ಸಾಧನೆ ಮಾಡಿರುವ ಬಾಳಿಲದ ವಿದ್ಯಾಬೋಧಿನಿ ಪ್ರೌಢಶಾಲೆಗೆ ಈ ಬಾರಿ ವಿಶೇಷ ಪ್ರಶಸ್ತಿ ಪ್ರಕಟಿಸಲಾಗಿತ್ತು. ಇತ್ತೀಚಿನ ವರ್ಷಗಳಲ್ಲಿ ನೀರಿಂಗಿಸುವ ಕೆಲಸವನ್ನು ಅತ್ಯಂತ ವ್ಯವಸ್ಥಿತವಾಗಿ ಮಾಡುತ್ತಿರುವ ಈ ವಿದ್ಯಾಸಂಸ್ಥೆಯ ಜಲಾಂದೋಲನ ನಮ್ಮ ನಾಡಿಗೇ ಮಾದರಿಯೆನಿಸಿದೆ. ಈ ಯಶೋಗಾಥೆಯನ್ನು ಗೌರವಿಸಲು ಕೇಂದ್ರ ಹಾಗೂ ಜಲಕೂಟ-

ವಾಣಿನಗರ ವಿಶೇಷ ಪ್ರಶಸ್ತಿ ನೀಡಿವೆ. ಪ್ರಶಸ್ತಿ 5 ಸಾವಿರ ರೂ. ನಗದು ಪುರಸ್ಕಾರವನ್ನು ಒಳಗೊಂಡಿತ್ತು. ಇದನ್ನು ಕೂಡ 'ಮಂಗಳೂರು ಅಜ್ಜ'ನ ನೆನಪಿನಲ್ಲಿ ನೀಡಲಾಯಿತು. ಪ್ರಶಸ್ತಿಯ ಪ್ರಾಯೋಜನೆ: ರಾಜೇಶ್-ದಿವ್ಯಾ-ಸೂಕ್ತಿ.



ಎಸ್. ಅರ್ಜುನ ದೇವ ಅವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವ ನಾ. ಕಾರಂತ.

ಪ್ರಶಸ್ತಿ ಪ್ರದಾನ ಸಮಾರಂಭ ನವೆಂಬರ್ 30, 2003ರಂದು ಸುಳ್ಯ ತಾಲೂಕಿನ ಕುಕ್ಕುಜಡ್ಕ ಸಮೀಪದ 'ಶ್ರೀರಂಗ'ದಲ್ಲಿ ಜರುಗಿತು. ಕರ್ನಾಟಕ ಮಾಧ್ಯಮ ಅಕಾಡೆಮಿಯ ಅಧ್ಯಕ್ಷ ಎಸ್. ಅರ್ಜುನ ದೇವ ಹಾಗೂ ಬೆಂಗಳೂರು ದೂರದರ್ಶನ ಕೇಂದ್ರದ ನಿರ್ದೇಶಕ (ಸುದ್ದಿ) ಖಾದ್ರಿ ಎಸ್. ಅಚ್ಯುತನ್ ಅತಿಥಿಗಳಾಗಿ ಪಾಲ್ಗೊಂಡು ಪ್ರಶಸ್ತಿ ಪ್ರದಾನ ಮಾಡಿದರು. ಡಿ.ಡಿ. ಭರಮಗೌಡ್ರ, ನಾ. ಕಾರಂತ ಪೆರಾಜೆ, ಡಾ. ಎನ್.ವಿ. ಕರುಣಾಕರ ಹಾಗೂ ವಿದ್ಯಾಬೋಧಿನಿ ಪ್ರೌಢಶಾಲೆಯ ಮುಖ್ಯೋಪಾಧ್ಯಾಯ ಬಿ.ವಿ. ಶಗ್ರಿತ್ತಾಯ ಪ್ರಶಸ್ತಿ ಸ್ವೀಕರಿಸಿದರು. 'ಶ್ರೀ' ಪಡ್ರೆ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ◆



ಖಾದ್ರಿ ಎಸ್. ಅಚ್ಯುತನ್ ಅವರಿಂದ ಬಿ.ವಿ. ಶಗ್ರಿತ್ತಾಯ ಅವರಿಗೆ ಪ್ರಶಸ್ತಿ ಪ್ರದಾನ.



# ಕೊನೆಯ ಹಂತವನ್ನು ತಲುಪುತ್ತಿದ್ದೇನೆ ...

• ಪೈಲೂರು ಲಕ್ಷ್ಮೀನಾರಾಯಣ ರಾವ್

ನನ್ನ ಜೀವನದ ಕೊನೆಯ ಹಂತವನ್ನು ನಾನು ತಲುಪುತ್ತಿದ್ದೇನೆ ಅಂತ ನನ್ನ ಈಗಿನ ದೇಹಸ್ಥಿತಿಯು ನೆನಪು ಮಾಡುತ್ತಿದೆ. ನೆನಪುಶಕ್ತಿ ಕಡಿಮೆಯಾಗುತ್ತಿದೆ. ಬಲಹೀನತೆ ಪ್ರಾರಂಭವಾಗಿದೆ. ಕೊನೇ ಗಳಿಗೆಯು ಯಾವ ಕಾಲದಲ್ಲಿಯೂ ಬರಬಹುದು. ಆ ಗಳಿಗೆಯನ್ನು ಸಂತೋಷದಿಂದ ನಾನು ಎದುರು ನೋಡುತ್ತಿದ್ದೇನೆ.

ನನ್ನ ಆಗಿಹೋದ ವರ್ಷಗಳನ್ನು ನೆನಪಿಸಿಕೊಂಡಾಗ ನಾನು ಅನುಭವಿಸಿದ ಅನೇಕ ಕಷ್ಟ ಸುಖಗಳು ನೆನಪಿಗೆ ಬರುತ್ತಿವೆ. ಮಾಡಿದ ಅನೇಕ ತಪ್ಪುಗಳೂ ನೆನಪಿಗೆ ಬರುತ್ತಿವೆ. ಅದರೊಂದಿಗೆ ನನ್ನ ಆತ್ಮಸಾಕ್ಷಿಯಾಗಿ ವರ್ತಿಸಿದ ಅನೇಕ ಉತ್ತಮ ಕೆಲಸಗಳೂ ನನಗೆ ತೃಪ್ತಿಯನ್ನು ತರುತ್ತಿವೆ.

ನನ್ನ ಕೊನೇ ಗಳಿಗೆಯಲ್ಲಿ ನನ್ನ ಹಿತೈಷಿಗಳಿಗೆ ಮತ್ತು ಸ್ನೇಹಿತರಿಗೆ ಸಂದೇಶ ಹೇಳಬೇಕಾದಲ್ಲಿ ಹೇಳುವುದು ಸಾಧ್ಯವಾಗಲಾರದು. ಆದ್ದರಿಂದ ನನ್ನ ಕೆಲವು ವಿಚಾರಗಳನ್ನು ಈಗ ನಿಮಗೆ ಹೇಳುತ್ತಿದ್ದೇನೆ.

ನನ್ನ ಜೀವನದಲ್ಲಿ ನೀವು ಏನಾದರೂ ಒಳ್ಳೆಯದನ್ನು ಕಂಡುಕೊಂಡಿದ್ದರೆ ನಿಮ್ಮ ಜೀವನದಲ್ಲಿ ಅವುಗಳನ್ನು ಜಾರಿಗೆ ತನ್ನಿ, ಕಷ್ಟ ಸುಖಗಳು ಜೀವನದ ಅವಿಭಾಜ್ಯ ಎಂದು ತಿಳಿಯಿರಿ. ನಮ್ಮ ಸಂಸ್ಕೃತಿ... ಅದರ ಪ್ರಕಾರ ಸತ್ಯ, ಶಾಂತಿ, ಪ್ರೇಮ ಪ್ರತಿಯೊಬ್ಬರ ಜೀವನದ ಅಡಿಪಾಯವಾಗಲಿ. ಆಗ ಮಾತ್ರ ಎಲ್ಲವನ್ನೂ ಸಹಿಸುವ, ಯಾರಿಗೂ ಹೆದರದಿರುವ ಪ್ರವೃತ್ತಿ ಬೆಳೆಯುತ್ತದೆ.

ಜೀವನದ ಗುರಿ ಹಣ ಸಂಪಾದನೆಯೇ ಅಲ್ಲ. ಮುಖ್ಯವಾಗಿ ಗುಣ ಸಂಪಾದನೆ ಬೇಕು. ಸಂಪಾದಿಸಿದ ಹಣದಲ್ಲಿ ನಿಮ್ಮ ನಿವೃತ್ತಿ ಪ್ರಾಯಕ್ಕಾಗಿ ಸ್ವಲ್ಪ ಹಣವನ್ನು ಇಟ್ಟುಕೊಳ್ಳಿ. ಅದು ನಿಮಗೆ ಪ್ರಯೋಜನಕ್ಕೆ ಬರುವುದು.

ಯಾರಾದರೂ ಯಾರನ್ನೂ ದ್ವೇಷಿಸಬಾರದು. ಅಸೂಯೆ ಪಡಬಾರದು. ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಿ ಇದ್ದದ್ದರಲ್ಲೇ ತೃಪ್ತಿಯಿಂದ ಇದ್ದರೆ ಮಾತ್ರ ಶಾಂತಿ ದೊರೆಯುವುದು.

ಕೆಲವರ- ಅಭಿಪ್ರಾಯಕ್ಕೂ ನಿಮ್ಮ ಅಭಿಪ್ರಾಯಕ್ಕೂ ವ್ಯತ್ಯಾಸ ಇರಬಹುದು. ಆದರೆ ಅವರೊಂದಿಗೆ ಚರ್ಚೆಗಿಳಿಯಬೇಡಿರಿ. ಎಲ್ಲರಿಗೂ ಅಭಿಪ್ರಾಯದ ಸ್ವಾತಂತ್ರ್ಯವಿದೆಯೆಂದು ತಿಳಿಯಿರಿ.

ಪ್ರಪಂಚಕ್ಕೆ ಬರುವಾಗ ನಿಮ್ಮೊಡನೆ ಯಾರೂ ಬರಲಿಲ್ಲ. ವಾಪಾಸು ಹೋಗುವಾಗ ಯಾರೂ ನಿಮ್ಮೊಡನೆ ಬರಲಾರರು.

ಪರಮಾತ್ಮನನ್ನು ನಂಬಿದರೆ ಮಾತ್ರ, ಅವನಿಂದ ಮಾತ್ರ ನಿಮಗೆ ಸುಖ ಶಾಂತಿ ದೊರೆಯುವುದು. ಎಲ್ಲವೂ ಅವನ ಇಚ್ಛೆಯಂತೆ ಎಂದು ತಿಳಿದರೆ ದುಃಖಕ್ಕೆ ಎಡೆಯಿಲ್ಲ.

ಹುಟ್ಟಿದ ಎಂಭತ್ತನೇ ವರ್ಷವನ್ನು diamond jubilee ಅಂತ ಆಚರಿಸುವುದಿದೆ. ಅದು ಡೈಮಂಡಿನ ಆಚರಣೆಯಲ್ಲ; ಅದು dieಯ bind ಅಂತ ಆಗಬೇಕೆಂತ ಸ್ವಾಮಿ ಹೇಳುತ್ತಾರೆ. ಪ್ರಾಪಂಚಿಕದೆಡೆಗೆ ದೃಷ್ಟಿ ಕಡಿಮೆಯಾಗಿ ಅಂತರ್‌ದೃಷ್ಟಿ ಬೆಳೆಯಬೇಕು. ಕಾಣುವ ವಸ್ತುಗಳ ಕಡೆಗೆ attachment ಕಡಿಮೆಯಾಗಿ detachment ಅಭಿವೃದ್ಧಿ ಆಗಬೇಕು ಅಂತ ಅವರು ಆಗಾಗ ಹೇಳುತ್ತಿರುತ್ತಾರೆ.

ಮಕ್ಕಳು ಪ್ರಾಯಕ್ಕೆ ಬಂದ ನಂತರ ಅವರ ಮಾತುಗಳನ್ನು ಕೇಳಿರಿ. ಅವರ ಮಾತುಗಳಿಗೆ ಬೆಲೆಕೊಡಿರಿ. ಅವರನ್ನು ಕೀಳಾಗಿ ನೋಡಬೇಡಿರಿ. ಒಂದು ಕುಟುಂಬದವರೆಲ್ಲರೂ ಒಗ್ಗಟ್ಟಿನಿಂದ ಇದ್ದರೆ, ಪ್ರೀತಿ ವಾತ್ಸಲ್ಯದಿಂದ ಇದ್ದರೆ, ಆ ರೀತಿ ವರ್ತಿಸಿದರೆ ಮಾತ್ರ ಆ ಕುಟುಂಬವು ಆದರ್ಶಪ್ರಾಯವಾಗಬಲ್ಲದು.

ಮಾತು ಬಲ್ಲವನಿಗೆ ವೈರಿಗಳಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲ; ಮಾತು ಮುತ್ತಿನಂತಿರಬೇಕು, ಮೌನ ಮಾಣಿಕ್ಯದಂತಿರಬೇಕು ಎಂಬ ಹಿರಿಯರ ಮಾತು ಸರಿಯಂತ ತಿಳಿಯಿರಿ.

ನಿಮ್ಮ ಯೌವನದ ದಿನಗಳಲ್ಲಿ ನೀವು ಸಂಪಾದಿಸಿದ ಹಣದಲ್ಲಿ ಅಲ್ಪಸ್ವಲ್ಪವನ್ನಾದರೂ ಪ್ರತ್ಯೇಕ ಇರಿಸಿಕೊಳ್ಳಿ. ನಿಮ್ಮ ಕೊನೆಯ ಕಷ್ಟದ ದಿನಗಳಿಗೆ ಅದು ಪ್ರಯೋಜನ ಬರುವುದು.

ಸಾಧ್ಯವಾದಷ್ಟೂ ದೀನ ದಲಿತರ ಸೇವೆ ಮಾಡಿರಿ.

ಮಹಾತ್ಮರ ಕತೆಗಳನ್ನು ಓದಿರಿ. ಕೃತಿಗಳನ್ನೂ ಓದುತ್ತಿರಿ. ಆದರಿಂದ ಮನಃಶಾಂತಿ ದೊರೆಯುವುದು.

---

(ಅಜ್ಜ 1997ರ ಆರಂಭದಲ್ಲಿ ವ್ಯಕ್ತಪಡಿಸಿದ ಅನಿಸಿಕೆಗಳಿವು. ಧ್ವನಿಮುದ್ರಣ: ಶಿವರಾಂ ಪೈಲೂರು)

◆


ಜನವರಿ 12, 1912 - ಡಿಸೆಂಬರ್ 8, 2002

# ಪೈಲೂರು ಲಕ್ಷ್ಮೀನಾರಾಯಣ ರಾವ್

## ಹೆಜ್ಜೆ ಗುರುತುಗಳು ...

| | | |
|---|---|---|
| ಜನನ | : | ಜನವರಿ 12, 1912. ಸುಳ್ಯ ತಾಲೂಕಿನ ಅಮರ ಮೂಡ್ನೂರು ಗ್ರಾಮದ ಪೈಲೂರು ಎಂಬಲ್ಲಿ. (ಈ ಮನೆಗೆ ಮಿತ್ತಮಜಲು ಎಂಬ ಹೆಸರೂ ಇದೆ.) |
| ತಂದೆ | : | ಗೋವಿಂದಯ್ಯ |
| ತಾಯಿ | : | ಲಕ್ಷ್ಮಿ |
| ಸಹೋದರರು | : | ಗೋಪಾಲಕೃಷ್ಣ, ವೆಂಕಟ್ರಮಣ, ಮಹಾಬಲೇಶ್ವರಯ್ಯ (ಅಣ್ಣಂದಿರು), ಶಿವರಾಮಯ್ಯ (ತಮ್ಮ) |
| ಸಹೋದರಿಯರು | : | ಮೂಕಾಂಬಿಕೆ, ಸರಸ್ವತಿ (ಅಕ್ಕಂದಿರು), ಲಕ್ಷ್ಮಿ (ತಂಗಿ) |
| ಪ್ರಾಥಮಿಕ ಶಿಕ್ಷಣ | : | ಪೈಲೂರು, ಕಂಜರ್ಪಣೆ ಶಾಲೆಗಳು |
| ಪ್ರೌಢ ಶಿಕ್ಷಣ | : | ಬೆಳ್ಳಾರೆ |
| ಕಾಲೇಜು (ಬಿ.ಎ.) | : | ಸಂತ ಎಲೋಶಿಯಸ್ ಕಾಲೇಜು, ಮಂಗಳೂರು |
| ಮದುವೆ | : | 7.2.1941. ಕಟ್ಟ ಗೋವಿಂದಯ್ಯ - ಗಂಗಮ್ಮ ಅವರ ಮಗಳು ಪರಮೇಶ್ವರಿ ಯೊಂದಿಗೆ - ಸುಬ್ರಹ್ಮಣ್ಯದಲ್ಲಿ. |
| ಮಕ್ಕಳು | : | ಇಂದಿರಾ (ಅಳಿಯ : ವೆಂಕಟ್ರಮಣ), ಜಯಲಕ್ಷ್ಮಿ (ಅಳಿಯ : ಸುಬ್ರಹ್ಮಣ್ಯಂ), ಕೃಷ್ಣಕುಮಾರ್ (ಸೊಸೆ : ಪ್ರೇಮಾ), ಶಾರದಾ (ಅಳಿಯ : ಭೀಮ ಭಟ್), ರಾಮಚಂದ್ರ (ಸೊಸೆ : ಸುನೀತಾ) |
| ಮೊಮ್ಮಕ್ಕಳು | : | ಶ್ರೀದೇವಿ, ರಘುರಾಮ, ದಿವ್ಯಾ, ಮೀರಾ, ಮಾಲಿನಿ, ಶಶಿಧರನ್, ರಕ್ಷಿತಾ, ಅನಂತ ನಾರಾಯಣ, ಶುಭಾ, ಶಂಕರ ನಿಶಾಂತ್, ನಿಖಿಲಾನಂದ. |

| | | |
|---|---|---|
| ಕಲ್ಲಿಕೋಟೆಯಲ್ಲಿ ನಡೆದ 'ಅಖಿಲ ಭಾರತ ಸ್ವದೇಶಿ ವಸ್ತುಪ್ರದರ್ಶನ'ದಲ್ಲಿ ಜೇನುಸಾಕಣೆ ಕುರಿತ ಪ್ರದರ್ಶನಕ್ಕೆ ಬಂಗಾರದ ಪದಕ | : | 1935 |
| 'ಜೇನು ನೊಣ ಸಾಕುವಿಕೆ' ಪುಸ್ತಕ ಪ್ರಕಟಣೆ | : | 1935 |
| ಕೊಡಗಿನಲ್ಲಿ ಜೇನು ಪರಿವೀಕ್ಷಕ ಆಗಿ ಸೇವೆ | : | 1936 - 39 |
| ಚೊಕ್ಕಾಡಿಯಲ್ಲಿ 'ಪುತ್ತೂರು ತಾಲೂಕು ಸಹಕಾರಿ ಜೇನುವ್ಯವಸಾಯ, ಜೇನುಸಂಗ್ರಹ ಮತ್ತು ಮಾರಾಟ ಸಂಘ' ಸ್ಥಾಪನೆ | : | 21.5.1938 |
| ಪರಮೇಶ್ವರಿ ಅವರೊಂದಿಗೆ ಮದುವೆ | : | 7.2.1941 |
| ಮಿಲಿಟರಿ ಸೇರಿ ಕರಾಚಿಯಲ್ಲಿ ಸೇವೆ | : | 1941 |
| ಗುಂಡುಕುಟ್ಟಿ ಮಂಜುನಾಥಯ್ಯ, ಮೊಳಹಳ್ಳಿ ಶಿವರಾವ್ ಅವರ ಕರೆಯ ಮೇರೆಗೆ ಮರಳಿ ಊರಿಗೆ | : | 1941 |
| ಮಂಗಳೂರಿನಲ್ಲಿ 'ಅಖಿಲ ಭಾರತ ಜೇನುಕೃಷಿಕರ ಸಮ್ಮೇಳನ' ಸಂಘಟನೆ | : | 1942 - 43 |
| 'ಜೇನಿನ ವ್ಯವಸಾಯ' ಪುಸ್ತಕ ಪ್ರಕಟಣೆ | : | 1944 |
| ಜೇನುಸಂಘದ ಗೌರವ ಕಾರ್ಯದರ್ಶಿ | : | 1946-54 |
| 'ಜೇನಿನ ವ್ಯವಸಾಯ' 2ನೇ ಮುದ್ರಣ | : | 1955 |
| 'ಆರ್ನಮೆಂಟಲ್ ಫಿಶ್ ಫಾರ್ ಗಾರ್ಡನ್ ಪಾಂಡ್ಸ್ ಅಂಡ್ ಅಕ್ವೇರಿಯಮ್ಸ್' - ಇಂಗ್ಲಿಷ್ ಪುಸ್ತಕ ಪ್ರಕಟಣೆ | : | 1953 |
| ಇದೇ ಪುಸ್ತಕದ 2ನೇ ಮುದ್ರಣ | : | 1956 |
| 'ಮಧುವನ' ಮಾಸಪತ್ರಿಕೆಯ ಪ್ರಧಾನ ಸಂಪಾದಕ | : | 1957 |
| 'ಜೇನಿನ ವ್ಯವಸಾಯ' 3ನೇ ಮುದ್ರಣ | : | 1959 |
| ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘದ ಕಾರ್ಯದರ್ಶಿ | : | 1948-72 |
| ಯುನೈಟೆಡ್ ಏಜೆನ್ಸೀಸ್ ನಿರ್ವಹಣೆ | : | 1973-79 |
| ಪೈಲೂರು ಅಂಡ್ ಕಂಪೆನಿ ನಿರ್ವಹಣೆ | : | 1979-87 |
| ಮಂಗಳೂರು ಫಿಲಾಟೆಲಿಕ್ ಕ್ಲಬ್ ಅಧ್ಯಕ್ಷ | : | 1983-86 |
| 'ದಾಕಾ ಪೆಕ್ಸ್' ಸಂಘಟನೆ | : | 1984 |
| 'ಆರ್ನಮೆಂಟಲ್ ಫಿಶ್ ಫಾರ್ ಅಕ್ವೇರಿಯಂ' ಪುಸ್ತಕ ಪ್ರಕಟಣೆ | : | 1990 |
| ಮಂಗಳೂರಿನಲ್ಲಿ ಅಕ್ವಾ ಫೋರಂ ಸ್ಥಾಪನೆ | : | 1993 |
| ಕೆನರಾ ಅಕ್ವೇರಿಯಂ ಅಸೋಸಿಯೇಶನ್ ಅಧ್ಯಕ್ಷ | : | 1994-96 |
| 'ಜೇನು ವ್ಯವಸಾಯ' ಪುಸ್ತಕ (ಪರಿಷ್ಕೃತ 4ನೇ ಆವೃತ್ತಿ) ಪ್ರಕಟಣೆ | : | 1995 |

**ಲಕ್ಷ್ಮೀನಾರಾಯಣ ರಾವ್ ಕಾರ್ಯನಿರ್ವಹಿಸಿದ ಇತರ ಸಂಘ ಸಂಸ್ಥೆಗಳು**

- ಶ್ರೀ ಸತ್ಯಸಾಯಿ ಸೇವಾ ಸಮಿತಿಯ ಅಧ್ಯಕ್ಷ
- ತೋಟಗಾರಿಕಾ ಸಂಘದ ಕೋಶಾಧಿಕಾರಿ
- ಮಂಗಳೂರು ಸ್ಟಾಕ್ ಎಕ್ಸ್ಚೇಂಜ್ ಸ್ಥಾಪಕ ಸದಸ್ಯ
- ಭಾರತೀಯ ವಿದ್ಯಾಭವನದ ಕಾರ್ಯಕಾರಿ ಸಮಿತಿ ಸದಸ್ಯ
- ಗಾಂಧಿ ಶಾಂತಿ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಸದಸ್ಯ
- ಅಂಧರ ಸೇವಾ ಸಂಘದ ಸ್ಥಾಪಕ ಸದಸ್ಯ

**ವಿದೇಶ ಪ್ರವಾಸ**

ಅಮೇರಿಕಾ : 1987 ಶ್ರೀಲಂಕಾ : 1970 ಮಲೇಷ್ಯಾ : 1971, 1983, 1994



# ಬಿನ್ನಹ

ಹಲವಾರು ವಿಷಯಗಳಲ್ಲಿ, ಅನೇಕ ಹವ್ಯಾಸಗಳಲ್ಲಿ ಆಸಕ್ತಿ ಹೊಂದಿದ್ದ, ಅಸಾಧಾರಣ ಕ್ರಿಯಾಶೀಲತೆಯ ಮಂಗಳೂರು ಅಜ್ಜನ ವ್ಯಕ್ತಿತ್ವ - ಸಾಧನೆಯನ್ನು ಒಂದೇ ಚೌಕಟ್ಟಿನಲ್ಲಿ ಬಿಂಬಿಸುವುದು ಸುಲಭವಲ್ಲ.

ಈ ಕೃತಿ ಅಜ್ಜನನ್ನು ಕುರಿತ ಪರಿಪೂರ್ಣ ಚಿತ್ರಣ ನೀಡಿದೆಯೆಂದು ಭಾವಿಸುವಂತಿಲ್ಲ. ಕೊರತೆಗಳಿದ್ದಲ್ಲಿ ಕ್ಷಮೆಯಿರಲಿ. ಪೂರಕ ವಿವರಗಳಿಗೆಸ್ವಾಗತ. ಅವನ್ನು ಒಂದೆಡೆ ವ್ಯವಸ್ಥಿತವಾಗಿ ದಾಖಲಿಸಿ ಇಡಲಾಗುವುದು.

**ಶಿವರಾಂ ಪೈಲೂರು**




**ಶಿವರಾಂ ಪೈಲೂರು**
'ಶ್ರೀ ನಿಲಯ'
ಅಂಚೆ : ಕುಕ್ಕುಜಡ್ಕ, ಸುಳ್ಯ ತಾಲೂಕು - 574 212
ದಕ್ಷಿಣ ಕನ್ನಡ
✆ : 0836 - 2748277, 94484 - 10077

ಪೈಲೂರು ಲಕ್ಷ್ಮೀನಾರಾಯಣರಾಯರು ನನಗೆ ಬಹು ಹಿಂದಿನಿಂದ ಪರಿಚಿತರು. ಅವರಷ್ಟೇ ಪರಿಚಯ, ಅವರ ಕೆಲಸದ ವಿಷಯವಾಗಿಯೂ ನನಗಿದೆ. ಅವರ ಪ್ರಿಯವಾದೊಂದು ಉದ್ಯಮ ಜೇನುನೊಣ ಸಾಕುವುದು. ಇದನ್ನು ಅವರು ವಿದ್ಯಾರ್ಥಿದೆಸೆಯಿಂದಲೇ ತೊಡಗಿ ಬಂದಿದ್ದಾರೆ. ಕೆಲವು ಕಾಲ ಕೊಡಗು ಸರಕಾರಕ್ಕೂ ಅವರು ಜೇನುನೊಣ ಸಾಕುವ ವಿಷಯದಲ್ಲಿ ಪ್ರಚಾರಕರಾಗಿದ್ದರು. ಅವರಿಗೆ ಈ ವಿಷಯದಲ್ಲಿ ಶಾಸ್ತ್ರೀಯವಾದ ಪರಿಜ್ಞಾನವಿದೆ.

- ಶಿವರಾಮ ಕಾರಂತ

(1944ರಲ್ಲಿ ಪ್ರಕಟಗೊಂಡ, ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರ 'ಜೇನಿನ ವ್ಯವಸಾಯ' ಕೃತಿಗೆ ಬರೆದ ಮುನ್ನುಡಿಯಿಂದ.)

